

# ಸಾವಿನ ಆಚೆ

(ಕಠೋಪನಿಷತ್ತಿನ ಕನ್ನಡ ಅನುವಾದ)



ರಚಿಸಿದವರು

ಜಿ. ಯಜ್ಞೇಶ್ವರ ಉಪಾಧ್ಯಾಯ

ಗುಂಡ್ಮಿ ದ. ಕ.



1959] =0= [Price : *1-0-0*

# ★ ಸಾವಿನ ಆಚೆ ★

ಕಠೋಪನಿಷತ್ತಿನ ಕನ್ನಡ ಅನುವಾದ
(ಪದ್ಯಾತ್ಮಿಕ)

ರಚಿಸಿದವರು ಮತ್ತು ಪ್ರಕಾಶಿಸಿದವರು
ಜಿ. ಯಜ್ಞೇಶ್ವರ ಉಪಾಧ್ಯಾಯ
ಗುಂಡ್ಮಿ

●

ವಿಲಂಬಿ ಮಕರ
ಶಾ. ಶಕ. ೧೮೮೧

ಬೆಲೆ ೧ ರೂಪಾಯಿ

ಪ್ರಥಮ ಮುದ್ರಣ
(1000)





ದೊರೆಯುವ ಸ್ಥಳ :

**ನಚಿಕೇತಾ ಪ್ರಕಾಶನ**

**ಜಿ. ವೈ. ಉಪಾಧ್ಯಾಯ**

ಗುಂಡ್ಮಿ, ದ. ಕ.



**ನೆಹರೂ ಕೆಫೆ**

ಪೋಲೀಸ್ ರೋಡ್, ಬೆಂಗಳೂರು-2.



A. N. ALSE

2/29. Ramaswami St. Mannady, Madras-1.



ಮುದ್ರಕರು :

**ಸ್ವತಂತ್ರ ಮುದ್ರಣಾಲಯ**

220, ಮೂರನೇ ರಸ್ತೆ, ಚಾಮರಾಜಪೇಟೆ

ಬೆಂಗಳೂರು-2.



ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯವರ್ಯ
ಶ್ರೀಮಚ್ಛಂಕರಭಗವತ್ಪಾದ ಪ್ರತಿಷ್ಠಿತ
ಶ್ರೀ ಕಾಂಚೀಕಾಮಕೋಟಿಪೀಠಾಧಿಪ ಜಗದ್ಗುರು
ಶ್ರೀಮಚ್ಚಂದ್ರಶೇಖರೇಂದ್ರಸರಸ್ವತೀ ಶ್ರೀಪಾದೈಃ

ಕ್ರಿಯತೇ ನಾರಾಯಣಸ್ಮೃತಿಃ ।

ಆತ್ಮಸ್ವರೂಪಮಮಲಂ ಪ್ರತಿಪಾದಯಂತ್ಯಾಃ
ಶ್ರೀಕಾಠಕೋಪನಿಷದಸ್ಸುಲಭಾವಗಾಹಂ ।
ಯಜ್ಞೇಶ್ವರೇಣ ರಚಿತಂ ಧೃತಹೃದ್ಯಪದ್ಯಂ
ಕರ್ಣಾಟಕಾನುವದನಂ ಕುರುತೇ ಮುದಂ ನಃ ॥

| | | |
|---|---|---|
| ವಿಜಯಯಾತ್ರಾಸ್ಥಾನಂ<br>ವಾಲ್ಮೀಕಿಪುರಂ<br>ವಿಲಂಬಮಾಘಶುದ್ಧಾಷ್ಟಮೀ | } | ನಾರಾಯಣ ಸ್ಮೃತಿಃ |

## ಸಾರಾಂಶ

ಆತ್ಮಸ್ವರೂಪವನ್ನು ಸ್ಪಷ್ಟವಾಗಿ ಪ್ರತಿಪಾದಿಸುವ ಕಠೋಪನಿಷತ್ತಿನ ಕನ್ನಡಾನುವಾದವನ್ನು ಸುಲಭವಾಗಿ ತಿಳಿಯುವಂತೆ ಯಜ್ಞೇಶ್ವರನು ರಚಿಸಿರುವನು. ಹೃದ್ಯಪದ್ಯಮಯವಾದ ಕೃತಿಯು ನಮಗೆ ಆನಂದಾತಿಶಯವನ್ನುಂಟು ಮಾಡುತ್ತದೆ.

# ಮುನ್ನುಡಿ

ಉಪನಿಷತ್ತುಗಳ ಮಹತ್ವವು ಎಷ್ಟೆಂದು ಹೇಳತೀರದು. ಸರ್ವ ಉಪನಿಷತ್ತುಗಳನ್ನು ಗೋವುಗಳನ್ನಾಗಿ ಮಾಡಿ ಶ್ರೀ ಕೃಷ್ಣಪರಮಾತ್ಮನು ಅವನ್ನು ಕರೆದು ಗೀತಾಮೃತವನ್ನು ಮೊದಲು ಅರ್ಜುನನಿಗೆ ಮತ್ತೆ ನಮಗೆಲ್ಲ ಉಣಿಸಿರುವನು. ಆಧ್ಯಾತ್ಮಿಕ ವಿಚಾರಮಾಡುವಲ್ಲಿ ಉಪನಿಷತ್ತುಗಳ ಸಹಾಯ ಅನಿವಾರ್ಯ ಅವುಗಳಲ್ಲಿ ಅನುಪಮ ಸಾಹಿತ್ಯ ಸೌಂದರ್ಯವೂ ಉಂಟು.

ಉಪನಿಷತ್ತುಗಳ ಅನುವಾದ ಕಾರ್ಯ ಕನ್ನಡದಲ್ಲಿ ಸ್ವಲ್ಪಮಟ್ಟಿಗೆ ಸಾಗಿರುತ್ತದೆ. ಮೈಸೂರು ರಾಜ್ಯಪಾಲರಾದ ಶ್ರೀ ಜಯಚಾಮರಾಜೇಂದ್ರ ಒಡೆಯರ ಉದಾರತೆಯ ಮೂಲಕ ಅರಮನೆಯ ಗ್ರಂಥ ಪ್ರಕಾಶನ ಮಾಲೆಯಲ್ಲಿ ವೇದೋಪನಿಷತ್ತುಗಳೇ ಮೊದಲಾದ ವೈದಿಕ ಸಾಹಿತ್ಯ ಅನೇಕವಾಗಿ ಕನ್ನಡಕ್ಕೆ ಇಳಿದಿರುತ್ತದೆ. ರಂಗನಾಥ ದಿವಾಕರರು ಉಪನಿಷದ್ರಹಸ್ಯವೆಂಬ ವಿಚಾರಪರ ಗ್ರಂಥವನ್ನು ರಚಿಸಿರುತ್ತಾರೆ.

ಪ್ರಸ್ತುತ ಗ್ರಂಥದ ರಚಯಿತರಾದ ಶ್ರೀ ಜಿ. ಯಜ್ಞೇಶ್ವರ ಉಪಾಧ್ಯಾಯರು ಸ್ವತಃ ಸಂಸ್ಕೃತ ಪಂಡಿತರು ಉಪನಿಷತ್ತುಗಳ ಮಹತ್ವ ಸ್ವಾರಸ್ಯಗಳನ್ನು ಮೂಲದಿಂದಲೇ ಅರಿಯಬಲ್ಲವರು ಮಾತ್ರವಲ್ಲ ಕನ್ನಡ ಲೇಖಕರು ಅವರ ಕವಿತಾ ಸಹಜತೆಗೂ ಅರ್ಥ ಲಾಲಿತ್ಯಕ್ಕೂ ಅವರನ್ನು ಅಭಿನಂದಿಸತಕ್ಕದ್ದು. ಲಾವಣಿ ಮಟ್ಟನಲ್ಲಿ ಬರೆದಿರುವರು. ಕಠೋಪನಿಷತ್ತಿನ ಆರೂ ವಲ್ಲಿಗಳ ಸರಳಾನುವಾದವಿದು. ದರ್ಶನಗಳ ಜಟಿಲತೆ ಮತ್ತು ಪಾರಿಭಾಷಿಕಗಳಗೊಂದಲವಿಲ್ಲದೆ, ಸುಲಭವಾಗಿ ಜನಸಾಮಾನ್ಯಕ್ಕೆ ಮುಂದಟ್ಟಾಗುವಂತೆ ನಚಿಕೇತ ಯಮರೊಳಗೆ ನಡೆದ ಸಂಭಾಷಣೆ ಚಿತ್ರಿತವಾಗಿದೆ. ಬ್ರಹ್ಮ ಸಾಕ್ಷಾತ್ಕಾರದ ವಿಚಾರವು ಮನನೀಯವಾಗಿದೆ.

"ಸಕಲ ಲಕ್ಷಣವು ವಸ್ತುಕಕೆ ವರ್ಣಕಕಿಷ್ಟು ವಿಕಳವಾದರು ದೋಷವಿಲ್ಲ." ಎಂಬ ಹಿರಿಯ ಕವಿವರ್ಯರ ಹೇಳಿಕೆಯಂತೆ ಶ್ರೀ ಉಪಾಧ್ಯಾಯರು ಈ ಕೃತಿಯನ್ನು ಹಾಡುಗಬ್ಬದ ರೂಪದಲ್ಲಿ ರಚಿಸಿರುತ್ತಾರೆ. ಇವರಿಂದ ಇನ್ನೂ ಹೆಚ್ಚಾಗಿ ವೈದಿಕ ಸಾಹಿತ್ಯವು ಕನ್ನಡಕ್ಕೆ ಅನುವಾದಿಸಲ್ಪಟ್ಟು ಕನ್ನಡ ಸಾಹಿತ್ಯದ ಐಶ್ವರ್ಯ ಹೆಚ್ಚುವಂತಾಗಲೆಂದು ಶುಭವನ್ನು ಕೋರುವ.

ಮದ್ರಾಸು<br>ಮಕರ ಸಂಕ್ರಮಣ<br>ವಿಲಂಬಿ<br>1959

ಎಂ. ಮರಿಯಪ್ಪ ಭಟ್ಟ

# ಅರಿಕೆ



ಉಪನಿಷತ್ತು ಎಂದೊಡನೆ ತಾತ್ವಿಕ ವಿಚಾರಗಳ ಗೊಂದಲವೆಂದು ಶ್ರದ್ಧಾವಂತನಾದ ನಾನೂ ಅವುಗಳನ್ನು ಮೊದಲು ಅರಿತುಕೊಳ್ಳುವ ಗೋಜಿಗೆ ಹೋದವನಲ್ಲ. ಕಾರಣಾಂತರದಿಂದ ಮನನ ಮಾಡುತ್ತಿದ್ದಂತೆ ಅವುಗಳಲ್ಲಿರುವ ಆಳವಾದ ಭಾವನೆಗಳೂ, ಸಾಹಿತ್ಯವೂ, ಕಥಾ ಘಟಕಗಳೂ 'ನವ್ಯ ಭವ್ಯ ಕಾವ್ಯಗಳನ್ನು ಮೀರಿಸುತ್ತವೆ' ಎಂದೆನ್ನಿಸಿತು ಅಂತೆಯೇ ಗುರು ಕೃಪೆಯಿಂದ ಈ ಅನುವಾದ ಕಾರ್ಯವು ಯಶಸ್ವಿಗೊಂಡಿತು.

ಈ ಉಪನಿಷತ್ತನ್ನು 'ಕಠ' ಎಂಬ ಶಿಷ್ಯನಿಂದ ಪ್ರಕಟಮಾಡಿಸಿದ್ದರಿಂದ 'ಕಠೋಪನಿಷತ್ತೆಂ'ಬ ಹೆಸರು ಬಂದಿತಂತೆ. ಇದರಲ್ಲಿ ಬರುವ ವಿಷಯವು ನಚಿಕೇತನು ಯಮನಿಂದ ಆತ್ಮತತ್ವೋಪದೇಶವನ್ನು ಪಡೆದುದು. ಕಥಾ ಘಟನೆಯೂ ಯುಕ್ತಿ ಯುಕ್ತವಾಗಿಯೂ ಸರಳವಾಗಿಯೂ ಇದೆ. ಒಂದೊಂದು ಮಂತ್ರವನ್ನೂ ಸುಲಭ ಶೈಲಿಯಲ್ಲಿ ಮೂಲ ಮಂತ್ರದ ಭಾವನೆಯೂ ಒಂದೊಂದು ಪದ್ಯದಲ್ಲಿ ಮೂಡುವಂತೆ ಪ್ರಯತ್ನಿಸಿರುವೆನು. ಓದುಗರಿಗೆ ಪಾರಿಭಾಷೆಯ ತೊಡಕಾಗಬಾರದೆಂದು, ಆದಷ್ಟು ಬಳಕೆದಲ್ಲಿರುವ ಕನ್ನಡ ಶಬ್ದಗಳನ್ನು-ಉಪಯೋಗಿಸಿರುವೆನು.

ಉಪನಿಷನ್ಮಂತ್ರಗಳಲ್ಲೂ ಹಳ್ಳಿಯ ಹಾಡುಗಳಂತೆ ಮಧುರ ಗಂಭೀರ ವಾದ ಶೈಲಿ ಭಾವನೆಗಳೇ ಹೊಳೆಯುತ್ತವೆ. ಆದ್ದರಿಂದ ವಿಶೇಷ ಛಂದಸ್ಸು ಪ್ರಾಸ ಮೊದಲಾದುವುಗಳಲ್ಲಿ ಲಕ್ಷ್ಯವಿಡದೆ, ಸರಳತೆಗೇ ಪ್ರಾಶಸ್ತ್ಯವಿಟ್ಟು ಹಳ್ಳಿಹಾಡುಗಳಂತೆಯೇ ರಚಿಸಿರುವೆನು. ಓದುಗರು ಇದರ ಪ್ರಯೋಜನವನ್ನು ಪಡೆದರೆ ಲೇಖಕನ ಶ್ರಮವು ಸಾರ್ಥಕ.

ಮುದ್ರಣದ ಸಮಯ ಆದ ತಪ್ಪುಗಳಿಗೆ ಸಾಧ್ಯವಾದಷ್ಟು ಶುದ್ಧಾ ಶುದ್ಧ ಪತ್ರಿಕೆಯನ್ನು ಕೊಟ್ಟಿದೆ. ಆದರೂ ಅನಿವಾರ್ಯವಾಗಿ ಹಲವಾರು ದೋಷಗಳು ಬಂದಿರಬಹುದು. ಸಹೃದಯರಾದ ಓದುಗರು ಉದಾರತೆಯಿಂದ ತಿಳಿಸಿದಲ್ಲಿ ಪುನರ್ಮುದ್ರಣ ಸಮಯದಲ್ಲಿ ಜಾಗ್ರತೆ ವಹಿಸಲು ಪ್ರಯತ್ನಿಸಬಹುದು.

ನಚಿಕೇತನು ಯಮನೊಡನೆ ಕೇಳಿದ ಮೂರನೇ ವರವು 'ಯೇಯಂ ಪ್ರೇತೇ ವಿಚಿಕಿತ್ಸಾ' ಎಂದು ಸಾವಿನ ಆಚಿನ ಸಂಶಯ ನಿವೃತ್ತಿಯನ್ನು ಅದೇ

ಈ ಉಪನಿಷತ್ತಿನ ಪ್ರಧಾನ ವಿಷಯವಾದ್ದರಿಂದ ಈ ಗ್ರಂಥಕ್ಕೆ 'ಸಾವಿನ ಆಚೆ' ಎಂಬ ಹೆಸರನ್ನಿಟ್ಟಿದೆ. ಮುನ್ನುಡಿಕಾರರಾದ ಶ್ರೀ ಮರಿಯಪ್ಪ ಭಟ್ಟರೂ ಅದನ್ನು ಅನುಮೋದಿಸಿರುವರು.

ಈ ಕೃತಿಯು ಕಠೋಪನಿಷತ್ತಿನ ಮೂಲಾನುವಾದ ಆದರೂ ಶಾಂಕರ ಭಾಷ್ಯವು ತುಂಬಾ ಸಹಕಾರಿಯಾಗಿದೆ. ಮೂಲದಲ್ಲಿ ಕಥೆಯ ತೊಡಕು ಬಂದಾಗ ಶಾಂಕರಭಾಷ್ಯದ ಅನುವೃತ್ತಿಯನ್ನು ಅನುಸರಿಸಲಾಗಿದೆ.

ಈ ಗ್ರಂಥದ ರಚನೆಗೂ, ಪ್ರಕಟನೆಗೂ ಸಹಾಯಕರಾದವರನ್ನು ನೆನಸ ದಿದ್ದರೆ ಕೃತಘ್ನತೆಯಾಗಬಹುದು. ನನ್ನ ಪಿತೃವ್ಯ ಸಮಾನರಾದ ವೇದಾಂತ ವಿದ್ವಾನ್ ಗುಂಡ್ಮಿ ಕೃಷ್ಣೋಪಾಧ್ಯಾಯರು, ಕಠೋಪನಿಷತ್ತಿನ ಸಂಸ್ಕೃತ ಮೂಲವನ್ನು ವಿವರವಾಗಿ ವಿವರಿಸಿ ಸಲಹೆ ಕೊಟ್ಟವರು. ನನ್ನ ವಿದ್ಯಾಗುರುಗ ಳಾದ ಸಾಲಿಗ್ರಾಮ ವಾಣೀ ವಿಲಾಸಿನೀ ಸಂಸ್ಕೃತ ಶಾಲೆಯ ಮುಖ್ಯೋಪಾ ಧ್ಯಾಯರಾದ ಶಿರೋಮಣಿ ಕೆ. ಶ್ರೀನಿವಾಸ ಉಪಾಧ್ಯಾಯರು ನನ್ನ ಆಳವಾದ ಅಭ್ಯಾಸಕ್ಕೆ ಕಾರಣರಾದವರು. ಕುಂದಾಪುರ ಬೋರ್ಡ್ ಹೈಸ್ಕೂಲ್ ಕನ್ನಡ ಪಂಡಿತರಾದ ಕೃಷ್ಣ ಉಡುಪರೂ, ಮತ್ತು ಮದ್ರಾಸ್ ಯೂನಿವರ್ಸಿಟಿ ಕನ್ನಡ ಪ್ರಾಧ್ಯಾಪಕರಾದ ಶಂಕರ ಕೆದಲಾಯರೂ, ಹಸ್ತ ಪ್ರತಿಯನ್ನು ತಿದ್ದಿ, ವ್ಯಾಕರಣ; ಮತ್ತು ಕೃತಿಯ ಬಗ್ಗೆ ಅಮೂಲ್ಯ ಸಲಹೆ ನೀಡಿದವರು. ಮುನ್ನುಡಿ ಕಾರರಾದ ಮದ್ರಾಸ್ ಯೂನಿವರ್‌ಸಿಟಿ ಪ್ರಾಧ್ಯಾಪಕರಾದ ಎಂ. ಮರಿಯಪ್ಪ ಭಟ್ಟರು ಹಸ್ತಪ್ರತಿಯನ್ನು ನೋಡಿ, ನನ್ನ ಮನವಿಯನ್ನು ಆದರದಿಂದ ಸ್ವೀಕರಿಸಿ ಮುನ್ನುಡಿ ಬರೆದುದಲ್ಲದೆ, ಕೂಡಲೇ ಪ್ರಕಟಿಸುವ ಬಗ್ಗೆ ಉತ್ಸಾಹವನ್ನು ಕೊಟ್ಟವರು. "ವಿನೋದ" ಪತ್ರಿಕೆಯ ಸಂಪಾದಕರೂ ಮತ್ತು ಸ್ವತಂತ್ರ ಮುದ್ರಣಾಲಯದ ಮಾಲೀಕರೂ ಆದ ಶ್ರೀ ಜಿ. ನಾರಾಯಣ ಅವರು ಮುದ್ರಣದ ಯಶಸ್ಸಿಗೆ ಕಾರಣರಾದವರು. ಇವರೆಲ್ಲರಿಗೂ ನನ್ನ ಅನಂತ ಕೃತಜ್ಞತೆಗಳು.

ಮದ್ರಾಸಿನಲ್ಲಿರುವ ಸಹೃದಯರಾದ ಹಲವು ಗೆಳೆಯರ ಪ್ರೋತ್ಸಾಹ ವಿಲ್ಲದಲ್ಲಿ ಈ ಕೃತಿಯು ಇವು ಶೀಘ್ರವಾಗಿ ಬೆಳಕು ಕಾಣುತ್ತಿದ್ದಿಲ್ಲ. ಅಲ್ಲದೆ ಬೆಂಗಳೂರಿನ ಹಲವು ಗೆಳೆಯರೂ ಇದರ ಯಶಸ್ಸಿಗೆ ಕಾರಣರಾಗಿದ್ದಾರೆ. ಅವರೆಲ್ಲರಿಗೂ ನನ್ನ ಕೃತಜ್ಞತೆಯನ್ನು ವಿವರವಾಗಿ ಸಮರ್ಪಿಸುವೆನು.

ಸಹೃದಯ ಓದುಗರೂ ಪ್ರೋತ್ಸಾಹವಿತ್ತಲ್ಲಿ ಬೃಹದಾರಣ್ಯಕವೇ ಮೊದಲಾದ ಕೆಲವು ಉಪನಿಹತ್ತುಗಳ ಸ್ವಾರಸ್ಯವಿಭಾಗವನ್ನು ಕನ್ನಡಕ್ಕಿಳಿಸಿ ಕನ್ನಡಿಗರ ಸೇವೆಗೆ ಆತುರನಿದ್ದೇನೆ. ಉಪನಿಷತ್ ಪ್ರಕಾಶನಾದ ಪರಮಾತ್ಮನ ಕೃಪೆಯು ನಮ್ಮೆಲ್ಲರಿಗೂ ಇರಲಿ.

ಬೆಂಗಳೂರು
೨೨ ಮಕರ ವಿಲಂಬಿ

ಯಜ್ಞೇಶ್ವರ ಉಪಾಧ್ಯಾಯ
ಗುಂಡ್ಮಿ ದ.ಕ.

———

ಶ್ರೀಃ

# ಸಾ ವಿ ನ ಆ ಚೆ

## (ಕಠೋಪನಿಷತ್ತಿನ ಕನ್ನಡಾನುವಾದ)

---

## ಪ್ರಥಮೋಧ್ಯಾಯದ ಪ್ರಥಮ ವಲ್ಲೀ

ಕೂಡೆಮ್ಮ ಪಾಲಿಸಲಿ
ಕೂಡಿ ನಾವ್ ಭುಂಜಿಸಲಿ
ಕೂಡಿ ನಮ್ಮೊಳು ಬಲವು ಉಂಟಾಗಲಿ ।
ಕೂಡಿ ಬಲವನು ಮಾಡುವಂತಾಗಲಿ ॥
ವೀರ್ಯವತ್ತಾಗಿರಲಿ
ನಾವು ಗಳಿಸಿರುವುದದು
ದ್ವೇಷ ಬೇಡವು ನಮಗೆ ಶಾಂತಿಯಿರಲೀ ।
ಶಾಂತಿಯಿರಲೀ ಸ್ಥಿರ ಶಾಂತಿಯಿರಲೀ ॥ ೧ ॥

ಬಯಸಿ ಮೇಲ್ಮೆಯ ತನ್ನ
ವಾಜಶ್ರವಸ ಮುನ್ನ
ಮಾಡಿದನು ವಿಶ್ವಜಿತು ಯಾಗವನ್ನೂ ।
ಸರ್ವಸ್ವ ದಕ್ಷಿಣೆಯ ಯಾಗವನ್ನೂ ॥
ಅವನು ಆಯಾಗದಲಿ
ತನ್ನೆಲ್ಲ ಸಿರಿಯನ್ನು
ನೆರೆದ ವಿಪ್ರರಿಗೆಲ್ಲ ದಾನಿಸಿದನೂ ।
ಅವನಿಗಿಹ ನಚಿಕೇತನೆಂಬ ಮಗನೂ ॥ ೨ ॥

ಆ ಕುಮಾರಕನಲ್ಲಿ
ಹುಡುಗತನವಿದ್ದರೂ
ತಾತಹಿತ ಬಯಸುವಾ ಶ್ರದ್ಧೆಯಾಗಾ

ಬುದ್ಧಿಯಲಿ ತಾನಾಗಿ ಸೇರಿತಾಗಾ ||
ದಕ್ಷಿಣೆಯ ದನಗಳನು
ಋತ್ವಿಜರು ಪಾಲಿನಲಿ
ಒಯ್ಯುತಿರೆ ಮನದಲ್ಲಿ ಯೋಚಿಸಿದನೂ |
ತನ್ನಲ್ಲಿ ತಾನೆ ಆಲೋಚಿಸಿದನೂ || ೨ ||

ಕುಡಿಕುಡಿದು ನೀರನ್ನು
ಅಗಿದಗಿದಗಿದು ಹುಲ್ಲನ್ನು
ಕರಕರೆದು ಹಾಲನ್ನು ಒಣಗಿರುವವೂ
ಕರಣಗಳು ಎಲ್ಲವೂ ಸವೆದಿರುವವೂ ||
ಹಸುಗಳನು ಪಡೆದವಗೆ
ಸುಖವಿಹುದೆ ಕೊಡುವವಗೆ
ಸಿಗುವುದೇ ನಾನಂದ ಲೋಕಗಳವೂ |
ಆ ಮಹಾ ಹೆಸರಾಂತ ಲೋಕಗಳವೂ || ೪ ||

ಆದರೂ ಕೊಡಬೇಕು
ಯಾಗದಾ ನಿಯಮವದು
ಯಾಜಕನ ಸರ್ವಸ್ವ ದಕ್ಷಿಣೆಯಿದೂ |
ತನ್ನದೆಂಬುದನೆಲ್ಲ ದಾನಿಸುವದೂ ||
ನಾನವನ ಮಗನಿರುವೆ
ಅವನದೇ ಆಗಿರುವೆ
ಕೆಡಕುಗಳನೆಲ್ಲ ಪರಿಹರಿಸಬೇಕು
ಆತ್ಮಪ್ರದಾನದಿಂ ಹರಿಸಬೇಕೂ || ೫ ||

ಎಂದು ಯೋಚಿಸಿ ಮನದಿ
ತಂದೆಯಾ ಬಳಿ ಬಂದು
'ತಾತನನ್ನಾರಿಗೇ ಕೊಡುವೆ' ಯೆಂದಾ
ತಿರುಗಿಯೂ ಮರುಗಿಯೂ ಮಾತನೆಂದಾ

ಕೇಳಿ ಮೂರನೆ ಬಾರಿ
ಸಿಡುಕಿ ಕುವರನಿಗೆಂದ
'ನಿನ್ನನ್ನು ಮೃತ್ಯುವಿಗೆ ಕೊಡುವೆ' ನೆಂದಾ
ಸಹಿಸಲಸದಳವಾದ ದುಡುಕಿನಿಂದಾ ॥ ೬ ॥

'ಬಹುಜನಗಳಿರಬಹುದು
ನನ್ನಂಥ ಮಕ್ಕಳೂ
ಆದರವರೊಳು ನಾನು ಉತ್ತಮನಿಹೆ ।
ಅಥವ ಮಧ್ಯಮರೊಳಗೆ ಮಧ್ಯಮನಿಹೆ ॥
ಅಧಮ ನೆಂದಿಗು ಅಲ್ಲ
ಆದರೂ ಪಿತನುಡಿದ
ನನ್ನಿಂದ ಯಮಗೇನು ಕರ್ತವ್ಯವೊ ।
ಇಂದೆನ್ನ ಸನ್ನಿಹಿತ ಕರ್ತವ್ಯವೊ' ॥ ೭ ॥

ಕ್ರೋಧ ವಶದಿಂದೊಮ್ಮೆ
ತಾತ ತಾ ನುಡಿದರೂ
ಸಟೆಯಾಗದಿರಲೆಂದು ಹಿತವನುಡಿದಾ ।
ತನ್ನ ಕೊರಗುತಲಿರುವ ಪಿತನಿಗೊರೆದಾ ॥
'ತಿಳಿದು ನೋಡ್ ಪೂರ್ವಜರ
ನೋಡಿತರ ಸಜ್ಜನರ
ಸಟೆಯಿಂದ ಮುದುಕತನ ಬಾರದಿಹುದೇ ॥
ಮಸಣವೆಂಬುದು ತಾನೆ ಬಾರದಿಹುದೇ ॥ ॥ ೮ ॥

ಸಸಿಯಂತೆ ಮಾನವರು
ಹುಟ್ಟುವರು ಸಾಯುವರು
ಮಡಿದರೂ ಗಿಡದಂತೆ ಪುಟ್ಟುವುದದೂ ।
ತಿರುಗಿಯೂ ಮರುಗಿಯೂ ಪುಟ್ಟುವುದದೂ ॥
ಸ್ಥಿರವಿರದ ಲೋಕದೊಳು
ಸಟೆಯಿಂದಲೇನುಫಲ

ಆ ನಿನ್ನ ಸತ್ಯವನು ಪಾಲಿಸಯ್ಯಾ ।
ಯಮುನಲ್ಲಿಗೆನನ್ನು ಕಳುಹಿಸಯ್ಯಾ ॥ ೯ ॥

ನುಡಿಮುತ್ತನಾಲಿಸೀ
ಹೃದಯವನು ಬಂಧಿಸೀ
ತನ್ನ ಸ್ಥಿರ ಸತ್ಯತಗೆ ಸುತನ ಕಳುಹೇ ।
ಮೃತ್ಯುವಿನ ಮುಖಕೆ ನಿಜಸುತನ ಕಳುಹೇ ॥
ತಾಶನಿಂ ಬೀಳ್ಕೊಂಡು
ಯಮು ಭವನಕೈತಂದು
ಅವನ ಬರ ಹಾರೈಸುತಲ್ಲೆ ಉಳಿದಾ ।
ಮೂರು ರಾತ್ರಿಗಳನ್ನು ನಿಂತೆ ಕಳೆದಾ ॥ ೧೦ ॥

ಪೋಗಿಬಂದಂತಕನ
ಮನೆಯಲೆಚ್ಚರಿಸಿದರು
'ಅತಿಥಿ ಬ್ರಾಹ್ಮಣ ಮನೆಗೆ ಬಂದಿರುವನೂ ।
ಪುಜ್ವಲಿಸುತಿರುವಗ್ನಿಯಂತಿರುವನೂ ॥
ಅವನ ದಾಹವ ನಿನಿತು
ತಣಿಸುವರು ಬಲ್ಲಿದರು
ಓ ! ಯಮುನೆ! ಕೊಂಡೊಯ್ಯು ಉದಕವನ್ನು
ಪಾದ್ಯಾದಿ ಶಾಂತಿ ಸಾಮಗ್ರಿಯನ್ನು ॥ ೧೧ ॥

ತಿಳಿಯದೇ ತಿಳಿದು ತಾ
ಬರುವ ಬಯಕೆಯ ಫಲವು
ಸವಿ ಮಾತು ದಾನಧರ್ಮಗಳು ಎಲ್ಲಾ
ಪುತ್ರರೂ ಪಶುಗಳೂ ಇವುಗಳೆಲ್ಲಾ ॥
ಉಳಿಯಲಿವುಗಳಲೊಂದು
ಅಲ್ಪಮತಿ ಪುರುಷನಿಗೆ
ಅತಿಥಿ ಬ್ರಾಹ್ಮಣ ಮನೆಯೊಳುಣದಯಿರಲೂ
ಉಪವಾಸದಿಂದಲೇ ವಾಸಿಸಿರಲೂ ॥ ೧೨ ॥

ಮೂರು ರಾತ್ರಿಗಳುಳಿದೆ
ನೀನೆನ್ನ ಮನೆಯಲ್ಲಿ
ಉಣದೆ ಹೇ ! ಬ್ರಾಹ್ಮಣನೆ ಅತಿಥಿಯಾಗೀ
ನಮಸೆ ತಕ್ಕವನಿರುವ ಅತಿಥಿಯಾಗಿ ||
ವಿಪ್ರ ! ನಿನೆಗೆರಗುವೆನು
ಭದ್ರವದು ನನಗಿರಲಿ
ಮೂರು ವರಗಳ ಕೇಳು ಅದರ ಬಗೆಗೇ |
ಉಪವಾಸದಿಂದಲೇ ಇರುವ ಬಗೆಗೇ || ೧೩ ||

ಕೊಡುವದಾದರೆ ವರವ
ಎನ್ನಪಿತ ಗೌತಮಗೆ
ನೆಮ್ಮದಿಯು ನಗುವ ಮನಸದುವೆ ಬರಲೀ
ಅನಿತು ನನ್ನಲ್ಲಿ ತಾ ಮುನಿಸು ಬಿಡಲೀ ||
ಮೃತ್ಯು ! ನೀನೆನ್ನಬಿಡೆ
ಮಗನೆಂದು ಗುರುತಿಸಲಿ
ಇದುವೆ ಮೂರ್‍ವರಗಳಲಿ ಮೊದಲು ಕೇಳ್ವೆ
ಪಿತನ ಸಂತಸವನ್ನು ಮೊದಲು ಕೇಳ್ವೇ || ೧೪ ||

ನಾನಿನ್ನ ಕಳುಹಿದೊಡೆ
ಪ್ರೀತಿಯಲಿ ಗುರುತಿಸುವ
ಶಿಷ್ಯರೌದ್ದಾಲಕಿಯೊ ಆರುಣಿಯರಂತೇ |
ನಿನ್ನನ್ನು ಮಗನೆಂದು ಈ ಮೊದಲಿನಂತೇ ||
ಸುಖವಾಗಿ ರಾತ್ರಿಯನು
ಮಲಗಿ ನಿಟ್ಟನು ಕಳೆದು
ಮೃತ್ಯುಮುಖದಿಂಬಂದ ನಿನ್ನ ನೋಡುವನೂ |
ತನ್ನ ಮಗನೆಂದು ಸಂತಸದಿ ನೋಡುವನೂ || ೧೫ ||

ಆ ಸ್ವರ್ಗಲೋಕದಲಿ
ರೋಗಾದಿ ಭಯವಿರದು

ಯಮನೆ ! ನಿನ್ನಾಭೀತಿ ಮುದಿತನವರದಿರದೂ
ಸ್ವಲ್ಪವಾದರು ಅಲ್ಲಿ ಇಲ್ಲದೇ ಇಹುದು ॥
ಹಸಿವೆ ತೃಷೆ ಎರಡನ್ನು
ದಿವ್ಯ ಲೋಕದಿ ಕಳೆದು
ಶೋಕ ವಿರಹಿತನಾಗಿ ಸಂತೋಷಿಸುವನೂ ।
ಸ್ವರ್ಗಲೋಕದಲಿ ತಾ ಬಲು ಮೋದಿಸುವನೂ ॥ ೧೬ ॥

ಆ ಸ್ವರ್ಗ ಸಾಧಿಸುವ
ಅಗ್ನಿಯನು ತಿಳಿದಿರುವೆ
ಮೃತ್ಯು ನೀನೆನಗರುಹು ಅಗ್ನಿ ವಿದ್ಯೆಯನು ।
ಶ್ರದ್ಧಾಳುವಾದೆನಗೆ ಅಗ್ನಿವಿದ್ಯೆಯನೂ ॥
ಯಾಜಿಸಿದ ಯಜಮಾನ
ಅಮರತ್ವವನು ಪಡೆವ
ಇದುವೆ ನಾ ಕೇಳುವಾ ಎರಡನೇ ವರವೂ
ಅಗ್ನಿ ವಿಜ್ಞಾನವಿದು ಕೇಳವಾ ವರವೂ ॥ ೧೭ ॥

ನಿನಗೆ ತಿಳಿ ಹೇಳುವೆನು
ಎನ್ನ ನುಡಿಯವಧರಿಸು
ಸ್ವರ್ಗ ಕೊಡುವಗ್ನಿಯನು ತಿಳಿದಿರುವೆ ನಾನೂ !
ನಚಿಕೇತ ! ಅದನು ತಿಳಿ ಹೇಳುವೆನು ನಾನೂ ॥
ಸ್ವರ್ಗಾದಿಲೋಕಸುಖ
ಸಾಧಕನು ಅವನ ತಿಳಿ
ವಿಶ್ವರೂಪದಿ ಜಗಕೆ ಸ್ಥಿರನಾಗಿ ಇರುವಾ ॥
ಬುದ್ಧಿಗಹ್ವರದಲ್ಲಿ ನಿಹಿತನಾಗಿರುವಾ ॥ ೧೮ ॥

ಲೋಕಕ್ಕೆ ಮೊದಲಾದ
ಆ ಅಗ್ನಿಯನ್ನೊರೆದ
ನಚಿಕೇತನಿಗೆ ಅಗ್ನಿ ಇಷ್ಟಿಕಾ ವಿಧಿಯಾ
ಎಷ್ಟು ಹೇಗೆನ್ನುವಾ ವಿವರದಾ ಬಗೆಯಾ ॥

ಯಮನು ನುಡಿದುದನೆಲ್ಲ
ಅವನು ಪ್ರತ್ಯುಚ್ಚರಿಸೆ
ಮೃತ್ಯುತಾ ತೃಪ್ತಿಯಲ್ಲವಗೆ ಹೇಳಿದನೂ ।
ತಿರುಗಿಯೂ ಅವನನ್ನು ಕರೆದು ಹೇಳಿದನೂ ॥ ೧೯ ॥

ಅವಗೆಂದ ಪ್ರೀತಿಯೊಳು
ದೊಡ್ಡಮನಸಿನ ಯಮನು
ಇಂದೀಗ ಒಂದು ವರ ತಿರುಗಿ ನಾ ಕೊಡುವೆ ।
ನಾಲ್ಕನೇ ವರವನ್ನು ನಿನಗೆ ನಾ ಕೊಡುವೆ ॥
ನಿನ್ನ ಹೆಸರಿಂದಲೇ
ಅಗ್ನಿ ತಾನಿರುವನೂ ।
ಸ್ವೀಕರಿಸು ವೈಚಿತ್ರ್ಯವಿರುವ ಸರಪಣಿಯಾ ।
ಪರಿಗ್ರಹಿಸು ಕರ್ಮಮಯವಾದ ಸರಪಣಿಯಾ ॥ ೨೦ ॥

ಮೂರು ತೆರದಲಿ ಚಿತಿಸಿ
ನಾಚಿಕೇತಾಗ್ನಿಯನು
ಮೂರ್ವರಾಜ್ಞೆಯ ಪಡೆದು ಆಚರಿಸುವವನು ।
ಯಜನ ಅಧ್ಯಯನ ದಾನವ ಮಾಡುಪವನು ॥
ಹುಟ್ಟು ಸಾವನು ಕಳೆದು
ಸರ್ವಜ್ಞನಂ ತಿಳಿದು
ಸ್ತುತ್ಯದೇವನ ಕಂಡು ಶಾಂತಿ ಪಡೆಯುವನೂ ॥
ಅತ್ಯಂತವಾದುದೀ ಶಾಂತಿ ಪಡೆಯುವನೂ ॥ ೨೧ ॥

ತ್ರೈವಿಧಿಯ ನರಿತು ಈ
ನಾಚಿಕೇತಾಗ್ನಿಯುನು
ತಿಳಿದೋದಿಯಾಚರಿಸಿ ಯಾಜಿಸುವನೊ ।
ವಿದ್ವಾಂಸ ಕ್ರತುವನ್ನು ಚಿತಿಸುವವನೊ ॥
ಮೃತ್ಯುಪಾಶವನವನು
ಮುಂದಾಗಿಯೇ ಕಳೆದು

ಶೋಕವನು ದಾಟ ಸಂತೋಷಿಸುವನೂ
ಸ್ವರ್ಗಲೋಕದಲಿ ತಾ ಬಲು ಮೋದಿಸುವನೊ || ೨೨ ||

ಸ್ವರ್ಗಕಾರಣನಾದ
ನೀನೆಂದ ಅಗ್ನಿಯನು
ಎರಡನೇ ವರದಿಂದ ಕೇಳಿದಂತಾಯ್ತು |
ಅಗ್ನಿ ವಿಜ್ಞಾನವನು ಪಡೆದುದಂತಾಯ್ತು ||
ನಿನ್ನ ಹೆಸರಿಂದಲೇ
ಅಗ್ನಿ ತಾನಿರುವನೂ
ಇದು ನಾನು ತುಷ್ಟಿಯಿಂ ಕೊಟ್ಟಿರುವ ವರವೂ |
ನಚಿಕೇತ! ಕೇಳು! ನೀ ಮೂರನೇ ವರವಾ || ೨೩ ||

ಯಾವುದೀ ಸಂಶಯವು
ಮಾನವನು ಮಡಿಯಲ್ಲೆ
ಆತ್ಮನೆಂಬವನೊಬ್ಬ ಇರುವನೆನ್ನುವರೂ |
ಇವನಿಲ್ಲವೆಂದು ಹಲಕೆಲವರೆನ್ನುವರು ||
ವಿಜ್ಞಾನವನ್ನಿದನು
ತಿಳಿಯ ಬಯಸುವೆ ನಾನು
ನಿನ್ನಾಜ್ಞೆಯಿಂದ ನಾ ಕೇಳುವಾ ವರವೂ |
ವರಗಳೊಳು ಉಳಿದುದೀ ಮೂರನೇ ವರವೂ || ೨೪ ||

ಸುಮನಸರಿಗೂ ಕೂಡ
ಅನುಮಾನವಿದರಲ್ಲಿ
ಕೇಳಿದವ ಹಿಂದೆಂದು ಸುಖದೊಳರಿತಿಲ್ಲ!
ಈ ಸೂಕ್ಷ್ಮಧರ್ಮವನು ಸುಖದೊಳರಿತಿಲ್ಲ ||
ಸಂದಿಗ್ಧ ಫಲವಿರದ
ಇತರ ವರಗಳ ಕೇಳು
ಹಟಬೇಡ ನಚಿಕೇತ ನನ್ನಲ್ಲಿ ಇನಿತು |
ಈ ವರವ ಬಿಟ್ಟುಬಿಡು ನನ್ನನೀ ಕುರಿತು || ೨೫ ||

ದೇವತೆಗಳಿದರಲ್ಲಿ
ಸಂಶಯಿತರಿರುವರೇ
ಏನಂದೆ ಮೃತ್ಯುನೀ ಸುಲಭವಲ್ಲೆಂದು ||
ಯಾವುದಿದು ತಿಳಿಯಲ್ಕೆ ಸುಲಭವಲ್ಲೆಂದು ||
ನಿನ್ನ ಹೊರತಿದನಾವ
ನೊರೆಯುವವ ಸಿಗಲಾರ
ವರವಿದಕೆ ಸಮನಾದುದಾವುದೈ ಇಹದೂ ||
ಬೇರೆ ಸರಿಸಮನಾದುದಾವುದೂ ಇರದೂ || ೨೬ ||

ನೂರಾರು ವರ್ಷಗಳು
ಬಾಳುವಾ ಮಕ್ಕಳನು
ಮೊಮ್ಮಕ್ಕಳನು ಕೇಳು ಬಹು ಪಶುಗಳನ್ನೊ
ಆನೆ ಕುದುರೆಗಳೊ ಬಂಗಾರ ರಾಶಿಯನೊ
ಭೂಮಂಡಲದಿ ದೊಡ್ಡ
ಸಾಮ್ರಾಜ್ಯವನು ಕೇಳು
ಎಷ್ಟು ವತ್ಸರಗಳನು ಬಾಳ ಬಯಸುವೆಯೋ |
ಜೀವಸ್ಯೆ! ನೀನೆಷ್ಟು ಇಚ್ಛಿಸುತಲಿಹೆಯೊ || ೨೭ ||

ಇದಕೆ ಸರಿಸಮನಾದ
ಬೇರಾವ ವರ ತಿಳಿವೆ
ಅದ ಕೇಳು ಸಿರಿಯನೋ, ಚಿರಜೀವಿಕೆಯನೊ |
ಸಿರಿಸಹಿತ ಬಹುಕಾಲ ಬಾಳುವಿಕೆಯನ್ನೊ ||
ಮಹಿಯೊಳಗೆ ನೀ ದೊಡ್ಡ
ಅರಸಾಗು ನಚಿಕೇತ
ಕಾಮಿತದಿ ಕಾಮ ಭೋಜಿಯ ನಿನ್ನ ಮಾಳ್ಪೆ |
ದಿವ್ಯ ಮಾನುಷ ಬಯಕೆ ಪಡೆವನಂ ಮಾಳ್ಪೆ || ೨೮ ||
ಯಾವುದು ಯಾವುದು ಕಾಮನೆಗಳವೊ |
ಮಾನವ ಲೋಕದಿ ದುರ್ಲಭವಿಹವೊ ||

ಅವುಗಳನೆಲ್ಲವ ಬೇಕಾದಂತೇ ।
ನಚಿಕೇತನೆಕೇಳ್ ಮನಬಂದಂತೇ ॥ ೨೯ ॥

ಈ ರಮಣಿಯರೊ ರಥವಾದ್ಯಗಳೊ ।
ಲಭಿಸಲಾರದವು ಮನುಜರಿಗಿವುಗಳು ॥
ನಾನಿತ್ತವರಿಂ ಸೇವೆಯ ಗೊಳ್ಳೈ ।
ಸಾವಿನ ಪ್ರಶ್ನೆಯ ಗೊಡವೆಯು ಬೇಡೈ ॥ ೩೦ ॥

ನಾಳಿಗೆ ಉಳಿಯದು ಮಾನವಗಾವುದು ।
ಇಂದ್ರಿಯ ತೇಜ ಕ್ಷಯವೆಲ್ಲವದು ॥
ಕಲ್ಯಾಯುಷ್ಯವು ಅಲ್ಪವೆ ಇಹುದು ।
ನೃತ್ಯಗೀತ ರಥ ನಿನಗೇ ಇರಲದು ॥ ೩೧ ॥

ವಿತ್ತದಿ ಮನುಜಗೆ ಬರುವದೆ ತೃಪ್ತಿ ।
ನಿನ್ನಕಂಡು ಸಿರಿ ಪಡೆಯಲದಿತ್ತು ॥
ಜೀವಿಸಿದರು ನಿನ್ನಾಳ್ವಿಕೆ ಇರುವದು ।
ಒಳಿತದುವೇ ವರ ನಾ ಕೇಳಿರುವದು. ॥ ೩೨ ॥

ಜರೆ ಮೃತಿ ಇರದಂಥವರನು ಹೊಂದಿ ।
ಭೂಮಿಯ ಕೆಳಗಿಂದಿಲ್ಲಿಗೆ ಬಂದು ॥
ಮುದುಕನಾಗಿ ಮರಣಿಸುವವನಿನಿತು ।
ಪಡೆಯುವುದಿದುವೆ ಪ್ರಯೋಜನವಿನಿತು ॥ ೩೩ ॥

ಈ ಗೀತಗಳನೊ ಈ ರತಿ ಸುಖವನೊ ।
ಈ ಪ್ರಮೋದಗಳ ನೆನೆಸುತಲಿಹನೊ ॥
ಬಹು ಸಂವತ್ಸರ ಪರಿಮಿತವಾದ ।
ಜೀವನದಿಂ ರಮಿಸುವನೇ ಆತ ॥ ೩೪ ॥

ಸಾವಿನಾಚಿನಾ ಸಂಶಯುವಿಹುದೊ
ಪರದ ವಿಚಾರದೊಳತಿಮುಹದಿಹುದೊ ||
ಆತ್ಮ ವಿಚಾರದ ನಿಜ ವಿಜ್ಞಾನವ
ಮೃತ್ಯುವೆ! ಪೇಳೈ ಎನಗೋಸುಗವೆ || ೨೫ ||

ಯಾವೀ ವರವತಿ ಗುಟ್ಟಾಗಿಹುಹೊ |
ದುಃಖದ ವಿವರಣೆಯನು ಹೊಂದಿಹುದೊ ||
ಅದರಿಂ ಹೊರತಾದಿತರಾವುದನೂ |
ಮನಸಿಲು ಕೇಳನು ಈ ನಚಿಕೇತ || ೨೬ ||

## ಇತಿ ಪ್ರಥಮುವಲ್ಲೀ

————

# ಅಥ ದ್ವಿತೀಯ ವಲ್ಲೀ

ಶ್ರೇಯವೆಂಬುದೆ ಬೇರೆ
ಪ್ರೇಯವೇ ಬೇರಿಹುದು
ಭಿನ್ನ ಪ್ರಯೋಜನದವೆರಡು ಬಿಗಿತಗಳೂ
ಪುರುಷನಿಗಿವೆರಡು ತರ ಬಂಧನಗಳೂ ||
ಅವುಗಳೊಳು ಶ್ರೇಯವನೆ
ಸಾಧಿಪಗೆ ಶುಭವಿಹುದು
ಹೀನನಿಹ ಪಾರಮಾರ್ಥದಿ ಪ್ರೇಮಿಯವನೊ
ಯಾರವನು ಪ್ರಿಯುಗಳನೆ ಬಯಸುವವನೊ || ೧ ||
ಶ್ರೇಯವೂ ಪ್ರೇಯವೂ
ಮಾನವನ ಹೊಂದುವವು
ಚೆನ್ನಾಗಿ ಪರಿಗಣಿಸಿ ಬೇರ್ಪಡಿಸುವಾತ |
ಬುದ್ಧಿಮುತಿಯುವುಗಳನು ಬೇರ್ಪಡಿಸುವಾತ ||

ಶ್ರೇಯವನೆ ಕೇಳುವನು
ಬಲ್ಲಿದನು ಪ್ರಿಯಕಿಂತ
ಮೂರ್ಖ ವೈಮನಮೆರಸೆ ಪ್ರೇಯವನೆ ಕೇಳ್ವ
ಯೋಗಕ್ಷೇಮವಗಳಿಪ ಸಾಧನವ ಕೇಳ್ವ || ೨ ||

ಆ ನೀನು ಪ್ರಿಯವಿಷಯ
ಪ್ರೇಮಂದಾ ಬಯಕೆಗಳ
ಪರಿಗಣಿಸಿ ನಚಿಕೇತ ಬಿಟ್ಟುಬಿಟ್ಟೆಯಲಾ ।
ಹಾ ನಿನ್ನ ಬುದ್ಧಿಯದು ಎಷ್ಟಿಹುದಲಾ ||
ಈ ತರದ ವಿತ್ತಮಯ
ಸಂಕಲಿಯ ಪಡೆಯದಿಹೆ
ಬಹು ಮನುಜರಿದರಲ್ಲೆ ಮುಳುಗಿ ಹೋಗುವರೂ
ಮೂಢರೀ ಧನದಾಸೆಯಲ್ಲೆ ಹೆಣಗುವರು || ೩ ||

ಬಹಳ ಅಂತರದವಿವು
ವಿಪರೀತ ವಿವಿಧ ಗತಿ
ಶ್ರೇಯವನ್ನೇಪ್ರೇಯವದು ಎಂದು ತಿಳಿವ
ಅವಿದ್ಯೆಯನೆ ವಿದ್ಯೆಯದು ಎಂದು ತಿಳಿವ ||
ವಿದ್ಯೆಯನು ಬಯಸುವವ
ನಚಿಕೇತ ನಿನ್ನರಿವೆ
ಬಹುಕಾಮುಗಳು ನಿನ್ನ ದೃಢಗೆಡಿಸಲಿಲ್ಲಾ ।
ಶ್ರೇಯದಾ ಮಾರ್ಗವನು ನೀ ಬಿಡಲೆ ಇಲ್ಲ || ೪ ||

ಅವಿದ್ಯೆಯೊಳಗೆ ತಾ
ಸುತ್ತಿಕೊಂಡಿರುವವರು
ಅತಿಬುದ್ಧಿವಂತ ತಾನೆಂದು ತಿಳಿವವರು ।
ಶಾಸ್ತ್ರಿಪಂಡಿತ ತಾನೆ ಎಂದು ತಿಳಿವವರು ||
ತಡೆತಡೆದು ಎಡವುತಿಹ

ಮೂಢತಾ ಸುತ್ತುತಿಹ
ಕುರುಡರಿಂದೊಯ್ಯುತಿಹ ಕುರುಡರಂತೇ ।
ಮಹದನರ್ಥವ ಪಡೆವರ್ ಕುರುಡರಂತೇ ॥ ೫ ॥

ಪರಸಾಂಪ್ರದಾಯವಿದು
ಹೊಳೆಯದಿದು ಎಳೆ ಮತಿಗೆ
ಹೆಜ್ಜೆಹೆಜ್ಜೆಗೆ ತಪ್ಪು ಮಾಡುತಿರುವವಗೆ ।
ಸಿರಿತನದ ಮೋಹದಿಂ ಮೂಢನಾದವಗೆ ॥
ಕಾಂಬುದಿದುವೇ ಲೋಕ
ಇಲ್ಲವೈ ಪರಲೋಕ
ಎಂದು ತಿಳಿವವ ನನ್ನ ವಶ ತಿರುಗಿ ಬರುವ ।
ಯಮನಾದ ನನ್ನ ವಶ ತಿರುತಿರುಗಿ ಬರುವ ॥ ೬ ॥

ಕೇಳಲೂ ಸಿಗದಿಹನು
ಬಹು ಜನರಿಗೀಆತ್ಮ
ಕೇಳಿದರು ಹಲವರಿದ ನರಿಯದಿಹರು
ಸಂಸ್ಕಾರವಿರದವರು ತಿಳಿಯದಿಹರು ।
ಅಪರೂಪ ಪೇಳುವವ
ನಿಪುಣ ತಾನದ ಪಡೆವ
ಅತಿವಿರಳ ತಿಳಿಯುವವನುಪದೇಶಿಸಿದರೂ
ನಿಜವರಿತ ನಿಪುಣನೇ ಉಪದೇಶಿಸಿದರೂ ॥ ೭ ॥

ಬೇರಾವ ನರನಿಂದ
ಅರುಹದಿರುವವನಿವನು
ಚೆನ್ನಾಗಿ ತಿಳಿಯದಿಹ ಬಹು ಚಿಂತಿಸಿದರೂ ।
ಬಹು ರೀತಿಯಲ್ಲಿಯಾಲೋಚಿಸಿದರೂ ॥
ಅದ್ವೈತ ದರ್ಶಿಯೊರೆ
ಇರದಿಲ್ಲಿ ಸಂಶಯವು

ಅಣುವಿಗಿಂತಲು ಸೂಕ್ಷ್ಮತರ್ಕಬಾಹಿರನೂ ।
ಆತ್ಮನವನವನೂಹೆಗೇ ನಿಲುಕದಿರುವವನೂ || ೮ ||

ಪ್ರಿಯತಮನೆ ಈ ಬುದ್ಧಿ
ತರ್ಕಮಾತ್ರದಿ ಬರದು
ಬೇರೆಯುವನೊರೆದರೇ ಗ್ರಹಿಸಲಿದುಸುಖವೂ
ಆಗಮುವನರಿತರುಹೆ ತಿಳಿಯಲಿದು ಸುಖವೂ
ಆವಮತಿ ನೀ ಪಡೆದು
ಸತ್ಯಧೃತಿಯಾದೆಯಲ
ಅಂಥವನೆ ನನಗಿರಲಿ ಪ್ರಶ್ನೆಮಾಳ್ಪವನೂ
ನಚಿಕೇತ! ನಿನ್ನಂಥ ಕೇಳುತಿರುವವನು || ೯ ||

ತಿಳಿವೆ ನಾ ಕರ್ಮಫಲ
ನಿಧಿಯಶಾಶ್ವತವೆಂದು
ನಿತ್ಯವಿರದವುಗಳಿಂ ನಿತ್ಯನಿಧಿ ಸಿಗದೂ ।
ಪರಮಾತ್ಮನೆಂಬ ಆ ನಿತ್ಯನಿಧಿ ಸಿಗದೂ ||
ಆದರೂ ನಚಿಕೇತ
ನಾನಗ್ನಿಯನುಚಿತಿಸಿ
ಅಸ್ಥಿರದ ದ್ರವ್ಯಸಮುಚಯದಿ ಪಡೆದಿರುವೆ
ನಿತ್ಯ ಈ ಯಮಪದವಿಯಲ್ಲೆ ಇರುತಿರುವೆ || ೧೦ ||

ಕಾಮಕ್ಕೆ ಕೊನೆಯಾದ
ಆಧಾರವಿಹ ಜಗದ
ಚ್ಯುತಿಯಿರದ ಯಜ್ಞಫಲ ರೂಪನಾಗಿರುವ
ಅಭಯದಾಪಾರದಲ್ಲವನು ನೆಲಸಿರುವಾ ||
ಸ್ತುತ್ಯಮಹಮಹಿಮನಿಹ
ವಿಸ್ತಾರಗತಿಯಾತ್ಮ
ಸ್ಥಿತಿಕಂಡು ಧೈರ್ಯದಿಂ ದೀರ ಬಿಟ್ಟೆಯಲಾ ।
ನಚಿಕೇತ ಭೋಗಗಳ ಬಿಟ್ಟು ಬಿಟ್ಟೆಯಲಾ || || ೧೧ ||

ಆಯಾಸ ಲಭ್ಯನಿಹ
ಗೂಢಾನುವೇಶಿತನು
ಬುದ್ಧಿಗುಹೆಯಲ್ಲಿದ್ದು ಸೂಕ್ಷ್ಮನೆನಿಸಿರುವಾ ।
ಗಹ್ವರಸ್ಥಿತ ಬಹಳ ಹಿಂದಿನವನಿರುವಾ ॥
ಆತ್ಮಾಭಿಮುಖಗುರಿಯ
ತಡೆದ ಮನದಲಿಗ್ರಹಿಸೆ
ಹೊಳೆವ ಆತ್ಮನಕಂಡು ಧೀರವಿಾರುವನೂ
ಬುದ್ಧಿಮತಿ ಸುಖದುಃಖಗಳನು ವಿಾರುವನೂ ॥ ೧೨ ॥

ಇದಕೇಳಿ ಗುರುಮುಖದಿ
ಚೆನ್ನಾಗಿ ಪರಿಗ್ರಹಿಸಿ
ಮರಣಿಸುವ ಮನುಜ ಧರ್ಮ್ಯವದಿದನು ಹಿಡಿದೂ
ಅತಿ ಸೂಕ್ಷ್ಮವಾದ ಈ ಆತ್ಮನಂ ಪಡೆದೂ ॥
ಅವನು ತಾ ಮೋದಿಸುವ
ಮೋದನೀಯನ ಪಡೆದು
ತೆರದ ಬಾಗಿಲ ಬ್ರಹ್ಮ ಭವನ ನೀ ನಿರುವೆ ।
ಮೋಕ್ಷಾರ್ಹ, ನಚಿಕೇತ ನಿನ್ನನ್ನು ತಿಳಿವೆ ॥ ೧೩ ॥

ಧರ್ಮದಿಂ ಹೊರತಾದ್ದ
ಧರ್ಮದಿಂ ಬೇರಾದ
ಕಾರ್ಯಕಾರಣಗಳಿಂದಿತರವಾದ
ಕರ್ಮಫಲ ಕರ್ಮದಿಂದಿತರವಾದ ॥
ಕಳೆದಿರುವ ಬರುವ ಕಾ-
ಲತ್ರಯಕೆ ಹೊರತಾದ
ಯಾವುದೀ ತರವಿಹುದ ಕಂಡಿರುವೆಯೊ ।
ಅದನೆ ನೀನೆನಗರುಹು ಕಂಡಿರುವೆಯೋ ॥ ೧೪ ॥

ಎಲ್ಲ ವೇದಗಳಾವ
ಗಮನೀಯ ಪದವಿಯನು

ಅವಿಭೇದದಿಂದ ತಾ ಪ್ರತಿಪಾದಿಸುಪವೊ ।
ತಪಗಳೆಲ್ಲವು ಎಲ್ಲಿ ಉಪಶಾಂತವಿಹವೊ ॥
ಯಾವುದಿಚ್ಛಿಸಿ ಬ್ರಹ್ಮ
ಚರ್ಯೆಯನು ಚರಿಸುವರೊ
ಸುಲಭದಲಿ ಪೇಳುವೆನು ನಿನಗೆ ಆ ಪದವಾ
ಶಬ್ದದಿಂಪೇಳೆಯದು ಓಂ ಎಂಬುದಿದುವೇ ॥ ೧೫ ॥

ಇದುವೆ ಅಕ್ಷರವಪರಬ್ರಹ್ಮವಾಚಕವಿಹುದು
ಇದುವೆ ಅಕ್ಷರವು ಪರಬ್ರಹ್ಮವೇ ಇಹುದು ।
ಇದುವೆ ಅಕ್ಷರವನ್ನು ತಿಳಿದುಪಾಸನೆ ಗೈವ
ಯಾರಿಗಾವುದು ಬಯಕೆ ಅವನದು ಪಡೆವ ॥ ೧೬ ॥

ಇದು ಬ್ರಹ್ಮಪ್ರಾಪ್ತಿಯಾಲಂಬನವು ಶ್ರೇಷ್ಠವೂ
ಇದುವೆ ಆಲಂಬನವು ಉನ್ನತವೆ ಇಹುದು ॥
ಈ ಸಾಧನೆಯ ತಿಳಿದು ಬ್ರಹ್ಮಲೋಕದಿ ಮೆರೆವ
ಇದನು ತಿಳಿದವ ಪರಬ್ರಹ್ಮನೇ ಇರುವ ॥ ೧೭ ॥

ಹುಟ್ಟದಿಹ ಸಾಯದಿಹ
ಮೇಧಾವಿಯಲ್ಲದಿಹ
ಇವನು ಯಾರಿಂದಲ್ಲ ಯಾರಿಗಿವನಲ್ಲ ।
ಕಾರಣವೆ ಇಲ್ಲದಿಹ ಕಾರಣನು ಅಲ್ಲ ॥
ಹುಟ್ಟಲ್ಲದವ ನಿತ್ಯ
ಕ್ಷಯವಿವರ್ಜಿತನಿವನು
ಹಿಂದಿನವನಾದರೂ ಹೊಸಬನೇ ಇಹನು ।
ಘಾತವಾದರು ದೇಹ ಹಿಂಸೆಗೊಳದಿಹನು ॥ ೧೮ ॥

ಕೊಲ್ಲುವವ ನಾನೆಂದು ಕೊಲ್ಲುವೆನು ಎನ್ನುವೆಯ ।
ಸತ್ತೆ ನಾನೆಂದು ಸತ್ತವನ ತಿಳಿಯುವೆಯಾ ॥
ಇಬ್ಬರೂ ಚೆನ್ನಾಗಿ ತಿಳಿಯದಿರುವವರವರು
ಕೊಲ್ಲಲಾರನು ಇವನು ಸಾಯಲಾರಾ ॥ ೧೯ ॥

ಅಣುವಿಗೂ ಅಣುವಿರುವ
ಮಹಕಿಂತ ಮಹದಿರುವ
ಆತ್ಮನಿವ ಜಂತುವಿನ ಹೃದಯದಲ್ಲಿರುವ ।
ಹೃದಯಗಹ್ವರದಲ್ಲಿ ನಿಹಿತನಾಗಿರುವ ।
ವಿರತನಿವನಂ ಕಂಡು
ಶೋಕವನು ಕಳೆಯುವನು
ಕರಣ ಪ್ರಸನ್ನತೆಯೊಳಾತ್ಮ ಮಹಿಮೆಯನೂ
ಬೆಳೆಯಳಿವು ಇರದಾತ್ಮ ತಾನೆ ಎಂಬುದನೂ ॥ ೨೦ ॥

ಕುಳಿತಂತೆ ಇದ್ದರೂ
ಬಹುದೂರ ಗಮನಿಸುವನು
ಮಲಗಿದರು ಎಲ್ಲಕಡೆ ನಡೆಯುವಂತಿರುವಾ ।
ಇಂದ್ರಿಯದ ಗತಿ ಹಿಡಿದು ತಿರುಗುವಂತಿರುವಾ ॥
ಹರ್ಷದಿಂತೂಡಿದವ
ಹರ್ಷರಹಿತನು ದೇವ
ನನ್ನ ಹೊರತಾರವನ ತಿಳಿಯೆತಕ್ಕವನು ।
ನನ್ನ ಹೊರತಾರಿರನು ತಿಳಿಯೆಬಲ್ಲವನು ॥ ೨೧ ॥

ಅಶರೀರಿಯಾದರೂ
ಸ್ಥಿರವಿರದ ದೇಹದೊಳು
ಇದ್ದು ತಾ ನಿತ್ಯನೆಂದೆನಿಸಿಕೊಂಡಿಹನೂ ।
ಅನವಸ್ಥದೇಹದಲಿ ವಿಕೃತವಿರದಿಹನೂ ॥
ದೊಡ್ಡವನು ಎಲ್ಲದಕು
ಎಲ್ಲಕಡೆ ವ್ಯಾಪಿಸಿಹ
ತನ್ನನರಿತಾಧೀರ ದುಃಖ ಪಡದಿಹನೂ ।
ತಾನವನೆ ಎಂದರಿತು ಶೋಕಪಡದಿಹನೂ ॥ ೨೨ ॥

ಈ ಆತ್ಮ ಬಹುವೇದ
ಪ್ರವಚನದಿ ಸಿಗಲಾರ

ಗ್ರಂಥಾರ್ಥ ಧಾರಣಾ ಶಕ್ತಿಯಿಂಸಿಗನೂ !
ಬಹುಶಾಸ್ತ್ರ ಶ್ರವಣಮಾತ್ರದೊಳಿವನು ಸಿಗನೂ ||
ಯಾವ ತನ್ಮಾತ್ರವನೆ
ಸಾಧಕನು ಭಜಿಸುವನೊ
ಅವನಿಗೇ ಈ ಆತ್ಮ ಲಭ್ಯವಾಗಿಹನೂ |
ತನ್ನ ನಿಜತನುವನ್ನು ತಾತೋರಿಸುವನೂ || || ೨೩ ||

ದುರ್ನಡತೆಯಿಂದ ಮನ
ತಡೆಯದಿರೆ ಸಿಗಲಾರ
ವಿಷಯ ಲಾಲಸೆಯಿಂದ ಶಾಂತವಾಗದಿರೇ
ಪಡೆಯದಿಹ ನೇಕಾಗ್ರ ಚಿತ್ತನಾಗದಿರೇ |
ತೃಪ್ತಿ ಇಲ್ಲದೆ ಇರುವ
ಮನಸಿನವಸಿಗು ಸಿಗನು
ಪ್ರಜ್ಞಾನದಿಂದಿವನ ಪಡೆಯಬಹುದು |
ಬ್ರಹ್ಮವಿಜ್ಞಾನದಿಂ ಪಡೆಯಬಹುದು || ೨೪ ||

ಯಾವಾತನಿಗೆ ಬ್ರಾಹ್ಮ
ಕ್ಷಾತ್ರವೆರಡೂ ಧರ್ಮ
ರಕ್ಷಣಾರೂಪ ಜಗವನ್ನವಾಗಿಹುದೊ |
ವರ್ಣಾಶ್ರಮಾಚಾರವಶನವಾಗಿಹುದೊ ||
ಮೃತ್ಯುವೇ ಯಾವಾತ
ಗಿರುವದುಪ್ಪಿನಕಾಯಿ
ಯಾರವನ ಹೀಗೆಂದು ತಿಳಿಯುವವರೂ |
ಎಲ್ಲಿರುವನವನೆಂದು ತಿಳಿಯುವವರೂ || ೨೫ ||

**ಇತಿ ದ್ವಿತೀಯ ವಲ್ಲೀ**

———

# ಅಥ ತೃತೀಯ ವಲ್ಲೀ

ಋತವನೆ ಕುಡಿವರು
ಜೀವೇಶ್ವರರೂ
ತಾ ಮಾಡಿದುದಕೆ ಲೋಕದಲೀ ।
ಶ್ರೇಷ್ಠವಾದ ಪರ-
ಬ್ರಹ್ಮಸ್ಥಾನದ
ಬುದ್ಧಿಗಹ್ವರವ ಸೇರುತಲೀ
ಅಂತಃಕರಣ ಪ್ರವೇಶದಲೀ ॥ ೧ ॥

ನೆಳಲು ಬಿಸಿಲದೆರ
ಸೋಜಿಗವೆಂದೂ
ಬ್ರಹ್ಮಜ್ಞಾನಿಗಳ್ಹೇಳುವರೂ ।
ಪಂಚಾಗ್ನಿಗಳಿಹ
ತ್ರಿಣಾಚಿಕೇತರು
ಕರ್ಮಿಷ್ಠರು ತಾ ಪೇಳುವರು ।
ಜೀವೇಶ್ವರರನು ಪೊಗಳುವರೂ ॥ ೨ ॥

ಯಾವುದು ಸೇತುವೊ
ನಾಶರಹಿತ ಪರ_
ಬ್ರಹ್ಮವೆ ನಿರ್ಭಯ ಪಾರವದೂ ।
-ದಾಟಲು ಬಯಸುವ
ಬ್ರಹ್ಮ ಜ್ಞಾನಿಗು
ಯಾಜಕರಿಗು ತಾ ಶಕ್ಯವದೂ ॥
ನಚಿಕೇತಾಗ್ನಿ ಸಮರ್ಥವದೂ ॥ ೩ ॥

ಆತ್ಮನೆ ರಥಿಕನು
ಶರೀರವೇ ರಥ

ಬುದ್ಧಿಯೆ ಸಾರಥಿ ಎಂದು ತಿಳಿ ।
ವಿಧ ವಿಧ ಕಲ್ಪನೆ
ಕಲ್ಪಿಸುವಾ ಮನ
ಕಡಿವಾಣವದದು ಎಂದು ತಿಳಿ ॥
ಮನವೇ ಪ್ರಗ್ರಹವೆಂದು ತಿಳಿ ॥ ೪ ॥

ಇಂದ್ರಿಯಗಳೆ ಹಯ
ಚಲಿಸುವ ದಾರಿಯೆ
ವಿಷಯಗಳೆಂದೂ ಪೇಳುವರೂ ।
ತನು ಇಂದ್ರಿಯ ಮನ
ಯುಕ್ತಾತ್ಮನಿಗೆ
ಭೋಕ್ತನೆಂದು ತಾ ಹೇಳುವರೂ ॥
ವಿಚಾರಶೀಲರೆ ಹೇಳುವರೂ ॥ ೫ ॥

ಆವನ ಬುದ್ಧಿಯು
ಅವಿವೇಕತ್ವದಿ
ಬಿಗಿಹಿಡಿಯದ ಮನವಾಗಿಹುದೋ ।
ನಿಪುಣವಿರದ ಆ
ಬುದ್ಧಿಸಾರಥಿಗೆ
ಇಂದ್ರಿಯಗಳು ವಶವಾಗಿರವೂ ॥
ಹಿಡಿತ ವಿರದ ಹಯದಂತಿಹವೂ ॥ ೬ ॥

ಯಾವನ ಬುದ್ಧಿಯು
ವಿಚಾರ ಪರವದೊ
ಬಿಗಿಹಿಡಿದಿಹ ಮನವಾಗಿಹುದೊ ॥
ನಿಪುಣನಿರುವ ಆ
ಬುದ್ಧಿಸಾರಥಿಗೆ
ಇಂದ್ರಿಯಗಳು ವಶವಾಗುವವೂ
ಕಡಿವಾಣದ ಹಯದಂತಿಹವೂ ॥ ೭ ॥

ಯಾವಾತನು ಅವಿ-
ವೇಕಿಯಾಗಿ ಸದಾ
ಹಿಡಿತವಿರದ ಮನನಾಗುವನೊ ।
ಅಶುಚಿಯಾದ ಆ
ರಥಿಕನು ಪಡೆಯನು
ನಾಶರಹಿತ ಪರಪದವಿಯನೂ ।
ಸಂಸಾರವನ್ನೇ ಹೊಂದುವನೂ ॥ ೮ ॥

ಯಾವಾತನ ಮತಿ
ವಿಚಾರಪರವದೊ
ಮನಕಡಿವಾಣವ ಹಿಡಿಯುವನೊ ।
ಸದಾ ನಿರ್ಮಲನೊ
ಆ ರಥಿ ಪಡೆಯುವ
ನಾಶರಹಿತ ಪರಪದವಿಯನೂ ।
ತಿರುಗಿಯು ಜನಿಸದ ಪದವಿಯನೂ ॥ ೯ ॥

ವಿವೇಕ ಬುದ್ಧಿಯ
ಸಾರಥಿಯುಳ್ಳವ
ಮನ ಕಡಿವಾಣವ ಪಿಡಿದಿಹನೊ ।
ಅವನೇ ದಾರಿಯ
ತೀರವ ಸೇರುವ
ಅದೇ ವಿಷ್ಣುವಿನ ಪರಮಪದ ॥
ವ್ಯಾಪಕಶೀಲ ಪರಾತ್ಮಪದಾ ॥ ೧೦ ॥

ಇಂದ್ರಿಯಗಳಿಗೂ
ಪರವೆಂದೆನಿಸಿದ
ವಿಷಯಗಳೆಲ್ಲವು ಮೇಲಿನವೂ
ವಿಷಯಗಳಿಂದಲು

ಮನವದು ಸೂಕ್ಷ್ಮವು
ವ್ಯಾಪಕವಾತ್ಮ ಸಮೀಪವದೂ ।
ಮನದಿಂಬುದ್ಧಿಯು ಪರವಿಹುದು ॥ ೧೦ ॥

ಬುದ್ಧಿಯ ದೆಸೆಯಿಂ
ಮಹದಾತ್ಮನು ಪರ
ಮಹತಿಗು ಪ್ರಕೃತಿಯು ಪರವಿಹುದು ।
ಪ್ರಕೃತಿಗು ಪರನಿಹ
ಪುರುಷನು ಅವನಿಂ
ಮೇಲಿನದಾವುದು ಇರದಿಹದು ।
ಅದೇ ಕೊನೆಯ ಪರ ಗತಿ ಇಹುದೂ ॥ ೧೨ ॥

ಇವನಿಹ ಸಮಸ್ತ
ವಸ್ತುಗಳಲ್ಲೀ
ಗುಪ್ತದಿ ಮಾಯೆಯ ಮುಸುಕಿನಲೀ ।
ಅದರಿಂದಾತ್ಮನು
ಹೊಳೆಯದೆ ಇರುಪನು
ಯಾವನಿಗೂ ಆತ್ಮಭಾವದಲೀ ॥
ಲೋಕವೆ ಭ್ರಮಿಪುದು ಮಾಯೆಯಲೀ ॥ ೧೩ ॥

ಕಾಣುವುದಾದರು
ಏಕಾಗ್ರತೆ ಇಹ
ಸೂಕ್ಷ್ಮನಿರೀಕ್ಷಣ ಮತಿಯಿಂದಾ ।
ಕರಣ ವಿಷಯ ಸೂ-
ಕ್ಷ್ಮತೆಯನುಕ್ರಮದಿಂ
ತಿಳಿಯುವ ಸೂಕ್ಷ್ಮದರ್ಶಿಗಳೇ ॥
ಗಹನವನರಿಯುವ ಜ್ಞಾನಿಗಳೇ ॥ ೧೪ ॥

ಸರ್ವೇಂದ್ರಿಯಗಳ
ಮನದಲಿ ಸೇರಿಸಿ

ವಿವೇಕಿ ತಾನಾ ಮನವನ್ನು |
ಬುಧ್ಧ್ಯಾತ್ಮನೊಳೂ
ಕೊಟ್ಟಾಜ್ಞಾನವ
ಮಹದಾತ್ಮನೊಳುಪ ಸಂಹರಿಸೀ |
ಪ್ರಥಮಜದೊಳು ಉಪಸಂಹರಿಸೀ || ೧೪ ||

ಸ್ವಚ್ಛ ಸ್ವಭಾವದ
ಆತ್ಮೋಪಾಧಿತ
ವಿಜ್ಞಾನವಾದಾ ಮನವನ್ನು
ಸರ್ವವಿಕಾರವು
ಲೀನಗೊಳ್ಳುವಾ
ಶಾಂತವೆಂದೆನಿಸಿದ ಆತ್ಮನೊಳೂ
ಲಯಿಸು ಪುರುಷ ಪ್ರತಿಬಿಂಬದೊಳು || ೧೬ ||

ನಿದ್ದೆಯಿಂದೇಳಿರಿ
ಎಚ್ಚರಗೊಳ್ಳಿರಿ
ಉಪದೇಶಗೊಳಿರಿ ಶ್ರೇಷ್ಠರ ಪಡೆದೂ
ಕ್ಷುರಧಾರೆಯ ತೆರ
ಹರಿತವು ದುಃಖದಿ
ದಾಟುವ ದುರ್ಗಮುದಾರಿಯಿದೂ ||
ಜ್ಞಾನಪಥವ ಕವಿ ಪೇಳುವದೂ || ೧೭ ||

ಶಬ್ದವಲ್ಲ ಸ್ಪರ್ಶವಲ್ಲ
ರೂಪವಲ್ಲ ಕ್ಷಯವು ಇಲ್ಲ
ರಸವು ಅಲ್ಲ ನಿತ್ಯ ಗಂಧವಿರುವುದಿಲ್ಲವೂ ||
ಆದಿಯಿಲ್ಲ ಅಂತ್ಯವಿಲ್ಲ
ಮಹತಿಗಿಂತ ಪರವದಿರುವ
ಶಾಶ್ವತವನು ಪಡೆದು ಮೃತ್ಯ ಪಥವ ಕಳೆಯುವಾ ||

ಮೃತ್ಯು ಒರೆದ ಚಿರಂತನದ
ನಚಿಕೇತನಿಂದ ಬಂದ
ನಾಚಿಕೇತ ಉಪಾಖ್ಯಾನ ಕೇಳುವಾತನೂ ।
ಗುರುಗಳಿಂದ ಕೇಳಿ ಬುದ್ಧಿ-
ವಂತ ಬ್ರಹ್ಮಲೋಕದಲ್ಲಿ
ಬ್ರಹ್ಮತಾನೆ ಆಗಿ ಅಲ್ಲಿ ಪೂಜೆಗೊಂಬನೂ ॥ ೧೯ ॥

ಗೋಪ್ಯವಾದ ಶ್ರೇಷ್ಠವಾದ
ಗ್ರಂಥವಿದನು ಯಾರು ಅರ್ಥ-
ವಿವರವನ್ನು ಬ್ರಹ್ಮ ಸಭೆಯೊಳ್ ಪೇಳುವಾತನೂ ।
ಅಥವ ಪ್ರಯತನಾಗಿ ಶ್ರಾದ್ಧ
ಕಾಲದಲ್ಲಿ ಕೇಳಿಸಿದರೆ
ಅದು ಅನಂತ್ಯ ಫಲವದಾಗಿ ಸಂಭವಿಸುವದೂ
ಅದು ಅನಂತ ಫಲವದಾಗಿ ಸಂಭವಿಸುವದು ॥ ೨೦ ॥

ಇತಿ ತೃತೀಯವಲ್ಲೀ

**ಕಠೋಪನಿಷತ್ತಿನ ಪ್ರಥಮಾಧ್ಯಾಯವೂ ಸಂಪೂರ್ಣಂ**

---

## ಅಥ ದ್ವಿತೀಯಾಧ್ಯಾಯಾ

### ಪ್ರಥಮವಲ್ಲೀ

ಹೊರ ಮುಖವೆ ಪಸರಿಸುವ
ಕರಣಗಳ ಸೃಷ್ಟಿಸಿದ
ಸರ್ವಸ್ವತಂತ್ರ ಪರಮೇಶನವನೂ ।
ಇಂದ್ರಿಯಗಳೆಲ್ಲವನು ಹಿಂಸಿಸಿದನೂ ॥
ಅದಕಾಗಿ ಹೊರಗಿರುವ

ವಿಷಯಗಳನೇ ಗ್ರಹಿಸಿ
ತನ್ನಂತರಾತ್ಮವನು ಕಾಣದಿಹನೂ ।
ತನ್ನನ್ನು ತಾನು ತಾ ಕಾಣದಿಹನೂ ॥ ೧ ॥

ಧೀರನಾದವನೊಬ್ಬ
ಪ್ರತ್ಯಗಾತ್ಮನನೋಳ್ಪ
ತನ್ನ ಇರುವಿಕೆಯನ್ನು ನೋಡುವವನೂ
ವಿಷಯಗಳವಸೆಯಿಂದ
ತಿರುಗಿಸಿದ ದೃಷ್ಟಿಯುವ
ಅಮೃತತ್ವವನ್ನು ತಾ ಬಯಸುವವನೂ
ಸಾಯದಿರುವಿಕೆಯನ್ನು ಬಯಸುವವನೂ ॥ ೨ ॥



ಹೊರಗಿನಾ ಕಾಮಗಳ
ಅನುಸರಿಪ ಬಾಲಕರು
ಮೃತ್ಯುವಿನ ವಿಸ್ತೀರ್ಣ ಪಾಶ ಪಡೆಯುವರೂ ।
ಅದಕೆ ಸುವಿಚಾರಿಗಳು
ಶಾಶ್ವತದ ಅಮೃತತ್ವ
ತಿಳಿದನರ್ಥದಭವವ ಬಯಸದೇ ಇಹರು
ಸ್ಥಿರವಿರದ ಸಂಸಾರವನು ಬಯಸದಿಹರು ॥ ೩ ॥

ಆವನಿಂ ಲೋಕವದು
ರೂಪರಸ ಗಂಧವನೊ
ಶಬ್ದವೊ ಸ್ಪರ್ಶವೋ ಮೈಥನದ ಸುಖವೊ ॥
ಈ ಆತ್ಮನಿಂದಲೇ
ವಿಸ್ಪಷ್ಟತಿಳಿಯುವದೊ
ಇಲ್ಲಾವುದುಳಿದಿಹುದಃ ಆತ್ಮನಿಂ ತಿಳಿಯೇ
ಸರ್ವಜ್ಞನಾತ್ಮನಿವನಿನಿತಿರುವುದಿದುವೇ ॥ ೪ ॥

ಸ್ವಪ್ನ ವಿಜ್ಞಾನವೊ
ಎಚ್ಚರದ ಜ್ಞಾನವೊ

ಈ ಎರಡು ಆವನಿಂದನುಭೂತವೊ !!
ವ್ಯಾಪಕನು ಮಹಮಹಿಮ
ಆತ್ಮನಿವನಂ ತಿಳಿದು
ಧೀರ ತಾ ಶೋಕವನು ಪಡೆಯದಿಹನೂ ।
ನಾನವನೆ ಇಹೆನೆಂದು ತಿಳಿಯುವವನೂ ॥ ೫ ॥

ಯಾರಿವನ ಕರ್ಮಫಲ
ಮಧುಸವಿಪ ಆತ್ಮನಂ
ಜೀವನಂ ಸನಿಯದೊಳು ತಿಳಿಯುವವನೊ ।
ಕಳೆದಿರುವ ಬರುವ ಕಾ-
ಲತ್ರಯವನಾಳ್ವನಂ
ಇವನು ನಿಜ ತನುವಿಂಗೆ ಗೋಪ್ಯನಿರನೂ
ಇದುವೆ ಅದು ನಚಿಕೇತ ಕೇಳಿರುವದೂ ೬ ॥

ಯಾವಾತ ನಾದಿಯೊಳು
ಸರ್ವೇಶನಿಂ ಜನಿಸಿ
ಪಂಚಭೂತಗಳಿಂದ ಮೊದಲಾದನೋ ।
ಅವನೆಲ್ಲ ಪ್ರಾಣಿಗಳ
ಹೃದಯ ಗುಹೆಯನು ಹೊಕ್ಕು
ಪಂಚಭೂತಗಳ ಸಹ ನಿಂದಿರುವನೊ ।।
ಯಾರಿನಿತು ನೋಡುವನೊ ಕಾಂಬುದಿದುವೇ ೭ ॥

ಸಮಷ್ಟಿ ರೂಪ ಪರ-
ಬ್ರಹ್ಮನಿಂ ಶಕ್ತಿಮಯಿ
ವಿಷಯಗಳ ನದಿಸುವಾ ಅದಿತಿಯಾಗಿ ।
ವ್ಯಷ್ಟಿರೂಪದ ಅದಿತಿ
ಮೊದಲೆ ಗುಹೆಯನು ಹೊಕ್ಕು ।
ನಿಂದು ಭೂತಗಳಿಂದ ವ್ಯಕ್ತವಿಹುದೊ ॥
ಜೀವಾಶ್ರಯೀ ಭೂತವಿದುವಿಹುದದೇ

ಅರಣಿಯಲ್ಲಿರುತಿರುವ
ಜಾತವೇದಾಗ್ನಿಯನು
ಗರ್ಭವನು ಸಂಭರಿಪ ಗರ್ಭಿಣಿಯರಂತೇ
ದಿನ ದಿನವು ಅಧ್ವರದಿ
ಆಜ್ಯಾದಿ ಹವಿಗಳಿಂ
ಎಚ್ಚರದಿ ಕರ್ಮಿಗಳು ಅರ್ಚಿಸುವ ತೆರದೀ ।
ಕರ್ಮಿಯರ್ಚಿಪ ವಿಶ್ವರೂಪಾಗ್ನಿ ತೆರದೀ ॥ ೯ ॥

ಪ್ರಾಣಿ ಹೃದಯದಿನಿಹಿತ
ನಿರುವ ಅಧ್ಯಾತ್ಮನಂ
ಯೋಗಿಗಳು ತನ್ನಲ್ಲಿ ಚನ್ನಾಗಿ ತಿಳಿದೂ
ಎಚ್ಚರದಿ ಹೃದಯದೊಳು
ದಿನದಿನವು ಅರ್ಚಿಸುವ
ಧ್ಯಾನ ಭಾವನೆಗೊಲಿವ ಆತ್ಮನವನೇ
ವಿಶ್ವರೂಪದಲಿರುವ ಆತ್ಮನವನೇ ॥ ೧೦ ॥

ಹಿರಣ್ಯಗರ್ಭನಿಂ
ಮುದಯಿಸುವನೋ ಸೂರ್ಯ
ದಿನದಿನವು ಅಸ್ತ ಹೊಂದುವನೊ ಆವನೊಳು ।
ಅವನಲರ್ಪಿತವಾಧಿ-
ದೈವಭೂತಗಳೆಲ್ಲ
ವಿಶ್ವವೇ ರಥನಾಭಿಯೊಳು ಹಳಿಯ ತೆರದೀ ॥
ಅವನ ಮಿಕ್ಕಾವುದೂ ಇರಲೊಲ್ಲದೋ ॥ ೧೧ ॥

ಯಾವುದೀ ಕಾಯದೊಳು
ನಾನು ತಾನೆನಿಸುವುದೊ ।
ಅದುನೆ ಶುದ್ಧಬ್ರಹ್ಮ ವಿಜ್ಞಾನಮಯವೂ ।
ಆತ್ಮನಲ್ಲಿರುವುದದೆ
ಜೀವದ ಉಪಾಧಿಯಿದು

ಯಾರಿಲ್ಲಿ ಭೇದಭಾವನೆಯ ನೋಡುವರೊ ॥
ಮರಣದಿಂ ಮರಣವನು ಅವನು ಹೊಂದುವನೂ ॥ ೧೨ ॥

ಸಂಸ್ಕರಿತ ಮನದಲ್ಲೇ
ತಿಳಿವುದು ಅಭೇದವನೆ
ಈ ಬ್ರಹ್ಮನೊಳು ಭೇದ ಸ್ವಲ್ಪವೂ ಇರದೂ ।
ಅವನು ತಾ ತಿರು ತಿರುತಿರುಗಿ
ಮೃತ್ಯುವನು ಹೊಂದುವನು
ಯಾರಿಲ್ಲಿ ಭಿನ್ನ ಭಾವನೆ ಹೊಂದುವನೊ
ತನ್ನಿಂದ ಹೊರತಾದುದಲ್ಪವೂ ಇರದೂ ॥ ೧೩ ॥

ಹೃದಯಾಬ್ಜ ವಿವರದೊಳು
ಅಂಗುಷ್ಠ ಗಾತ್ರ ನಿಹ
ಪುರುಷದೇಹದ ಮಧ್ಯ ನೆಲಸಿರುವನೊ ॥
ಕಳೆದಿರುವ ಬರುವ
ಕಾಲತ್ರಯುವನಾಳ್ವನಂ
ಅವನು ನಿಜ ತಿಳುವಿಂಗೆ ಗೋಪ್ಯನಿರನೂ ।
ಇದುವೆ ಅದು ನಚಿಕೇತ ! ಕೇಳಿರುವದೂ ॥ ೧೪ ॥

ಅಂಗುಷ್ಠಗಾತ್ರನಿಹ
ಪುರುಷ ತಾ ಹೊಗೆಯಿರದ
ನಲಿವ ದೀವಿಗೆ ಯೋಗಿಗಳ ಹೃದಯದೊಳಗೇ ।
ಭೂತ ಭವಿತವ್ಯಗಳ
ಶಾಶ್ವತದ ಒಡೆಯನಿಹ
ಅವನೆ ಇಂದಿರುವವನು ನಾಳೆಯೂ ಅವನೇ॥
ಅವನ ಸಮ ಬೇರೆಯವ ಮುಂದೆಯೂ ಇರನವ ॥ ೧೫ ॥

ಎತ್ತರದ ದುರ್ಗಮದಿ
ಹರಿದ ಮಳೆ ನೀರು ತಾ
ಪರ್ವತಗಳೆಳುಕಿನೊಳು ಚಿಗೆದೋಡುತಿಹುದೊ ।

ಈ ಧರ್ಮದಾತ್ಮನಿಂ
ಭಿನ್ನತನು ತಾ ಕಂಡು
ತನುಭೇದಗಳನೆ ತಾ ಅನುಸರಿಸುತಿಹುದೊ ||
ತಿರು ತಿರುಗಿ ಕಾಯಭೇದವನೆ ಹೊಂದುವದೊ || ೧೬ ||

ತಿಳಿನೀರಿನೊಳು ಎಸಿತು
ವಿಮಲ ಜಲ ಸಿಂಪಡಿಸೆ
ಏಕರಸವಾದ ತೆರವೇ ಆತ್ಮನಿಹನೂ |
ಭೇದದೃಷ್ಟಿಯನಳಿದು
ತಿಳಿವ ಸುವಿಚಾರಿಗೇ
ಏಕತ್ವದರ್ಶನನು ಆತ್ಮನಿನಿತಿಹನೂ ||
ಅದ್ವೈತ ದರ್ಶನವ ಧರಿಸು ಗೌತಮನೇ || ೧೭ ||

ಇತಿ ಪ್ರಥಮ ವಲ್ಲೀ

---

## ಅಥ ದ್ವಿತೀಯವಲ್ಲೀ

ಹನ್ನೊಂದು ಬಾಗಿಲಿನ
ಪಟ್ಟಣವು ಹುಟ್ಟರದ
ಚ್ಯುತಿ ಇರದಖಂಡ ವಿಜ್ಞಾನಸನಾತ್ಮನಿಗೆ |
ಸುವಿಚಾರದೊಳು ಭಜಿಸೆ
ದುಃಖತಾ ಪಡದಿಹನು
ಕರ್ಮ ಬಂಧನದಿಂದ ಮುಕ್ತನಾಗುವನೂ |
ತಿರುಗಿಯೂ ಹುಟ್ಟದಿಹ ಮೋಕ್ಷಪಡೆಯುವನೂ || ೧ ||

ಹಂಸಸಿವಪಸರಿಸುವ
ದಿವ್ಯ ಬೆಳಕಿಲಿ ಹರಿವ
ಜಗವನೆಲ್ಲವನವನು ಪ್ರಕಟಿಸುತಲಿರುವಾ ।
ಆಗಸದಿ ಬೀಸುತಿಹ
ನೆಲದಲ್ಲಿ ನೆಲಸಿರುವ
ಸೋಮು ತಾ ರಸನಾಗಿ ಕಲಶದಲ್ಲಿರುವಾ ।
ಅತಿಥಿರೂಪದಿ ಬಂದು ಗೃಹದಿ ನೆಲಸಿರುವಾ ॥ ॥ ೨ ॥

ಮನುಜರೂಪದೊಳಿರುವ
ದೇವತೆಗಳೊಳು ಮೆರವ
ಸತ್ಯದಲಿ ಯಜ್ಞದಲಿ ಹೊಳೆವನವನೇ
ಗಗನದೊಳು ವ್ಯಾಪಿಸಿಹ
ನೀರಿನಲಿ ನೆಲದಲ್ಲಿ
ಯಾಗದೊಳು ಅದ್ರಿಯೊಳು ಜನಿಸಿನಿರುವನವನೇ
ಸರ್ವಾತ್ಮನವಸತ್ಯ ದೊಡ್ಡವನು ಅವನೇ ॥ ೩ ॥

ಎದೆಯ ಮೇಲಣ ಪ್ರಾಣ-
ವಾಯು ತಾನೊಯ್ಯುತಿಹ
ಅಪಾನವಾಯುವು ಕೆಳಗೆ ನೂಕುತಿಹುದೊ ।
ಹೃದಯ ಮಧ್ಯದಿ ಕುಳಿತ
ಸೂಕ್ಷ್ಮಮತಿಗೊಲಿವನ
ಇಂದ್ರಿಯಗಳೆಲ್ಲವೂ ಪೂಜಿಸುವವೊ ॥
ಭೃತ್ಯ ಭೂಪತಿಯ ತೆರಪೂಜಿಸುವವೋ ॥ ೪ ॥

ಈ ಸರಿಯುತಿಹ ಶರೀ-
ರದೊಳಿರುವ ದೇಹಿ ತಾ
ದೇಹದಿಂದಲಿ ಬಿಡುಗಡೆಯ ಹೊಂದುತಿರೆ
ಇಲ್ಲಾವುದುಳಿದಿಹುದು
ಇದುವೆ ಆದು ನಚಿಕೇತ

ಅರಸಪುರ ಬಿಡಲೂರ ಜನರುಳಿವರೆನಿತೂ
ಆತ್ಮಗವಿಸಲು ದೇಹದೊಳಗಾವುದಿಹುದೂ || ೫ ||

ಪ್ರಾಣದಿಂದಲು ಬದುಕs
ಪಾನದಿಂದಲು ಬದುಕ
ಮನುಜ ಜೀವಿಸನೊಬ್ಬನಿಂದ್ರಿಯಗಳಿಂದಾ |
ಪ್ರಾಣಾದಿಗಳಿಗಿಂತ
ಬೇರೆಯವನಾದ ಈ
ಆತ್ಮನಿಂದಲೆ ಎಲ್ಲ ಕೂಡಿ ಬದುಕುವವೋ
ಅವನಲ್ಲೆ ಅವುಗಳಾಶ್ರಯಿಸಿ ಬದುಕುವವೊ || ೬ ||

ಈಗ ತಿರುಗಿಯು ನಿನಗೆ
ಹೇಳುವೆನು ಗುಟ್ಟನ್ನು
ಬ್ರಹ್ಮವಿವರದ ಚಿರಂತನವಿದನ್ನು ||
ಅಜ್ಞಾನವಶದಿಂದ
ಮರಣವನು ಹೊಂದಿತಾ
ಎನಿತು ಸರಿಯುವನಾತ್ಮ ಕೇಳು ಗೌತಮನೇ
ವಿಜ್ಞಾನದಿಂದ ಸಂಸಾರವಿರತಿಯನೂ || ೭ ||

ಮರಣವನು ಹೊಂದುವಾ
ದೇಹಿಗಳು ಹಲವರು
ತನುವಿಗೋಸುಗ ಯೋನಿಯನ್ನು ಹೊಂದುವರು
ವೃಕ್ಷಾದಿಸ್ಥಾವರವ
ಕೆಲವರನುಸರಿಸುವರು
ಅವನವನು ಮಾಡಿದಾ ಕರ್ಮವನುಸರಿಸೀ
ಹಿಂದೆ ಗೃಹಿಸಿದ ವಿಜ್ಞಾನವನು ಸರಿಸೀ || ೮ ||

ಯಾರಿವನು ನಿದ್ರಿಸಲು
ಎಚ್ಚರಿತ ಪುರುಷನಿಹ
ಅವನವನ ಬಯಕೆಗಳ ನಿರ್ಮಿಸುಲಿಹನೊ ||

ಅವನೆ ಶುದ್ಧಬ್ರಹ್ಮ
ಅವನೆ ಅವಿನಾಶಿಯೂ
ಅವನನಾಶ್ರಯಿಸಿ ಜಗವೆಲ್ಲವೂ ಇಹುದೊ ||
ಇದವಿಾರಿ ಯಾವುದಿರದಿದುವೆ ಗುಟ್ಟಿನದೂ || ೯ ||

ಎನಿತೋರ್ವನಗ್ನಿಯೇ
ಭುವನಪ್ರವೇಶದಲಿ
ವಿಧವಿಧದಿ ಬಹುರೂಪವಾಗಿರುವನೋ ।
ಅನಿತೋರ್ವನೇ ಎಲ್ಲ
ಪ್ರಾಣಿಹೃದಯದೊಳಾತ್ಮ
ವಿಧ ವಿಧದ ಪ್ರತಿರೂಪನಾಗಿರುವನೂ
ರೂಪವಿರಹಿತ ಹೊರಗು ವ್ಯಾಪಿಸಿಹನೂ || ೧೦ ||

ವಾಯು ವಬ್ಬನೆ ಪ್ರಾಣ-
ರೂಪದಿಂ ದೇಹವನು
ವಿಧ ವಿಧಧ ಪ್ರತಿರೂಪವಾಗಿರುವನೊ ||
ಅನಿತೆಲ್ಲ ಪ್ರಾಣಿಗಳ
ಹೃದಯಾಂತರಾತ್ಮತಾ
ವಿಧ ವಿಧದ ಪ್ರತಿರೂಪವಾಗಿರುವನೂ ||
ರೂಪವಿರದೇ ಹೊರಗು ವ್ಯಾಪಿಸಿಹನೂ || ೧೧ ||

ಲೋಕದಾ ಕಣ್ಣಾದ
ಜಗವ ಬೆಳಗಿಪ ಸೂರ್ಯ
ಅಶುಚಿ ದರ್ಶನದ ಹೊಂದೋಷವಿರದಿಹನೊ ।
ಅನಿತೋರ್ವ ಸರ್ವಭೂ-
ತಾಂತರಾತ್ಮನು ಹೊರಗು
ಲೋಕದುಃಖಗಳಿಂದ ಲೇಪವಿರದಿಹನೊ ।
ಸಂಸಾರ ದುಃಖದನುಭವದ ಹೊರಗಿಹನೋ || ೧೨ ||

ಜಗದೀಶನೊರ್ವನೇ
ಜಗವನಂ ವಶಗೊಂಡು
ಸರ್ವಭೂತಗಳಂತರಾತ್ಮನೆಂದೆನಿಸೀ ।
ಏಕರಸವಾದ ನಿಜ-
ವಿಜ್ಞಾನ ರೂಪವನೆ
ನಾಮರೂಪಾದಿ ಬಹುವಿಧವ ಮಾಡುವನೋ
ಬಹುವಿಧದ ಬೇಧವನೆ ನಿರ್ಮಿಸುವನೊ ॥ ೧೩ ॥

ತನ್ನೆದೆಯ ವಿವರದಲಿ
ನೆಲಸಿರುವ ಆತ್ಮನನು
ಬುದ್ಧಿಮತಿಯನುಭವದಿ ನೋಡುತಿಹನೊ ।
ಅವನೆ ಪರಮೇಶ್ವರನು
ಅವರಿಗೇ ಶಾಶ್ವತದ
ಬ್ರಹ್ಮಪರಮಾನಂದ ಸುಖವದಿಹುದೂ ।
ಅವಿವೇಕಿಗಳಿಗೆ ಆ ಸುಖವದಿರದೂ ॥ ೧೪ ॥

ನಿತ್ಯನೆಂದೆನಿಸಿಹನು
ನಿತ್ಯವಿರದವುಗಳಿಗೆ
ಚೇತನನು ಚೇತರಿಪ ಪ್ರಾಣಿಗಳಿಗೆ
ಸಂಸಾರಿಗಳ ಕರ್ಮ-
ಕನುರೂಪ ಕಾಮಿತವ
ಓರ್ವನೇ ಬಹು ಜನಗೆ ಕೊಡುತಲಿಹನೊ ।
ಆಯಾಸವಿರದೆ ಅನುಗ್ರಹಿಸುತಿಹನೊ ॥ ೧೫ ॥

ತನ್ನಲ್ಲಿ ಇರುತಿರುವ
ಪರಮಾತ್ಮನನ್ನಾವ
ಧೀರರನುಭವದಲ್ಲಿ ನೋಡುತಿಹರೊ
ಅವರಿಗೇ ಶಾಶ್ವತದ
ಶಾಂತಿಯದು ಲಭಿಸುವದು

ಇತರರಿಗೆ ಈ ತರದ ಶಾಂತಿ ಇರದೂ ।
ಅವಿವೇಕಿಗಳಿಗೆ ಈ ಶಾಂತಿ ಇರದೂ || ೧೬ ||

ಇದು ಅದುವೆ ಎಂದು ತಾ
ತಿಳಿಯುವವ ಪ್ರತ್ಯಕ್ಷ
ತೋರಿಸಲಶಕ್ಯವಿಹ ಪರಮ ಸುಖವಾ ।
ಆವರೀತಿಯಲಿ ನಾನ್
ಆ ಸುಖವ ತಿಳಿಯುವನೊ
ಹೊಳೆವುದೋ ಶೋಭಿಸದೊ ಹೇಗೆ ಎನಿತೆಂದೂ ।
ಪ್ರತ್ಯಕ್ಷ ಗೋಚರವೋ ಅಲ್ಲವೊ ಎಂದೂ || ೧೭ ||

ಅಲ್ಲಿ ಬೆಳಗನು ಸೂರ್ಯ-
ಚಂದ್ರ ತಾರೆಗಳೆಲ್ಲ
ಹೊಳೆಯವಿವು ಮಿಂಚುಗಳು ಅಗ್ನಿಯೆನಿತೂ
ಅವನ ಬೆಳಕನುಸರಿಸಿ
ಬೆಳಗುವವು ಎಲ್ಲವಿವು
ಅವನ ಹೊಳಪಿಂದೆಲ್ಲ ಹೊಳೆಯುತಿಹವೂ
ಬ್ರಹ್ಮನಿಂದಲೆ ಎಲ್ಲ ಬೆಳಗುತಿಹವೂ || ೧೮ ||

**ಇತಿ ದ್ವಿತೀಯ ವಲ್ಲೀ**

————

## ಅಥ ತೃತೀಯವಲ್ಲೀ

ಮೇಲ್ಗಡೆಯೆ ಬುಡವಿಹುದು
ಕೆಳಮುಖದ ಗೆಲ್ಲುಗಳು
ಅಶ್ವತ್ಥಮರವಿದು ಸನಾತನವಿದೂ ।
ಅದರ ಮೂಲವೆ ಶುದ್ಧಬ್ರಹ್ಮವಿಹುದೂ ||

ಅಮೃತವೆನಿಸಿರುವುದದೆ
ಅವನಲ್ಲೆ ಲೋಕಗಳು
ಎಲ್ಲವೂ ಆಶ್ರಯುವ ಹೊಂದಿರುವವೊ ||
ಅವನ ಮಿಕ್ಕಾವುದೂ ಇರಲೊಲ್ಲದೊ || ೧ ||

ಈ ಜಗವು ಎಲ್ಲವೂ
ಆವ ಪರಮಾತ್ಮನಾ
ಇರವಿನಿಂ ಚಲಿಸುವವೊ ನಿಯಮದೊಳಗೆ |
ನಡುಗುವವೊ ಮಹದಾದ ಭಯದ ಒಳಗೆ ||
ವಜ್ರಧರ ಸ್ವಾಮಿಗಂ
ಭೃತ್ಯ ಬೆದರುವ ತೆರವೆ
ಯಾರು ಈ ಬ್ರಹ್ಮನಂ ತಿಳಿಯುವವರೊ ||
ಸಾಯದಿರುವಿಕೆಯನ್ನು ಪಡೆವರವರೇ || ೨ ||

ಇವನ ಭಯದಿಂದಲೇ
ಅಗ್ನಿ ತಾ ದಹಿಸುತಿಹ
ಭಯದಿಂದಲೇ ಸೂರ್ಯ ಸುಡುತಲಿಹನೋ |
ಭಯದಿ ಪರಮೇಶ್ವರನ್ನ ಜಗವದಿಹುದೊ ||
ಭಯದಿಂದ ಇಂದ್ರನೂ
ವಾಯುವೂ ನಿಯಮದೊಳು
ಪಂಚಮದ ಮೃತ್ಯುವೂ ಓಡುತಿಹನೋ ||
ಬೆದರಿ ಧನಿಗನುಚರನು ಮಿತಿಯೊಳಿಹನೊ || ೩ ||

ಜೀವಿಸಿರಲಿಲ್ಲಿಯೇ
ಶಕ್ತನಿಹ ತಿಳಿಯಲ್ಕೆ
ಮೊದಲೆಯೇ ದೇಹದಾ ಪತನಕಿಂತ |
ಮುಕ್ತನಾಗುವ ಭಯದಿ ಬ್ರಹ್ಮವರಿತೊ ||
ಇಲ್ಲವಾದರೆ ಅವನ

ತಿಳಿಯದಿರುವಿಕೆಯಿಂದ
ಪಡೆವ ದೇಹವ ಪ್ರಾಣಿಲೋಕದೊಳಗೆ ||
ದೇಹ ಪತನದ ಮೊದಲೆ ತಿಳಿವುದದಕೆ || ೪ ||

ಎನಿತು ಕನ್ನಡಿಯಲ್ಲಿ
ಪ್ರತಿಬಿಂಬ ಕಂಡಂತೆ
ಆತ್ಮದರ್ಶನವಿಲ್ಲಿ ಬುದ್ಧಿಗುಹೆಯಲ್ಲಿ ।
ಸ್ವಪ್ನದಲಿ ಕಂಡಂತೆ ಪಿತೃಲೋಕದಲ್ಲಿ ||
ನೀರಿನಲಿ ಕಂಡಂತೆ
ಗಂಧರ್ವ ಲೋಕದಲಿ
ನೆಳಲು ಬಿಸಿಲುಗಳಂತೆ ಬ್ರಹ್ಮಲೋಕದಲೀ
ಅದಕೆ ಯತ್ನಿಸು ಆತ್ಮದರ್ಶನಕೆ ಇಲ್ಲೇ || ೫ ||

ಆಕಾಶ ಮೊದಲಾದ
ಭೂತಗಳನನುಸರಿಸಿ
ಬೇರಾಗಿ ಜನಿಸುವಾ ಇಂದ್ರಿಯಗಳಾ ।
ಬೇರಾಗಿಯೇ ಸರಿವ ಭಾವನೆಗಳಾ ||
ಹುಟ್ಟುಲಯುವೆರಡದಕೆ
ಆತ್ಮನಿಗೆ ಇಲ್ಲೆಂದು
ಬುದ್ಧಿಮತಿ ಸುವಿಚಾರದಿಂದ ತಿಳಿದೂ ||
ಶೋಕಿಸದೆ ಇಹನಾತ್ಮ ನಿತ್ಯನೆಂದೂ || ೬ ||

ಇಂದ್ರಿಯಗಳಿಂದಲೂ
ಮನಸದುವೆ ಪರವಿಹುದು
ಮನಕ್ಕಿಂತ ಬುದ್ಧಿಯದು ಪರವದಿಹಮೂ
ಸೂಕ್ಷ್ಮಮೇಲಿನವಾತ್ಮ ಸನಿಹವಿಹುದೂ ||
ಬುದ್ಧಿಗಿಂತಲು ಮೇಲೆ
ಹೈರಣ್ಯಗರ್ಭಮಹ

ತತ್ವವದು ಅದಕಿಂತ ಪರವದಿಹದೂ ।
ಪ್ರಕೃತಿಯದು ಅವ್ಯಕ್ತವೆನಿಸಿರುವದೂ ॥ ೭ ॥

ಅವಕ್ತದಿಂದಲೂ
ಮೇಲಿಹನು ಪುರುಷನೂ
ಸರ್ವ ಕಾರಣನೆಲ್ಲ ವ್ಯಾಪಿಸಿಹನೂ ।
ಬುದ್ಧಿಗೆಟುಕದ ಚಿನ್ಹೆ ಇರದೆ ಇಹನೂ ॥
ಗುರುವಿನಿಂ ಶಾಸ್ತ್ರದಿಂ
ಜೀವಿ ತಾ ತಿಳಿದವನ
ಸಂಸಾರದಿಂ ಮುಕ್ತಿ ಪಡೆವನವನೂ ।
ತನು ಕಳೆದರಮೃತತ್ವ ಗಳಿಪನವನೂ ॥೮ ॥

ನೋಡಲ್ಕೆ ನಿಲುಕದದು
ಪರಮಾತ್ಮನಾರೂಪ
ಕಣ್ಣಿಂದಲೊಬ್ಬನೂ ಕಾಣದಿಹನೂ ।
ಯಾವನೂ ಆತ್ಮನಂ ಕಾಣದಿಹನೂ ॥
ಬುದ್ಧಿಯಿಂಬಿಗಿಹಿಡಿವ
ಮನಭಾವದಿಂ.ಗೃಹಿಪ
ಯಾರು ಈ ಬ್ರಹ್ಮನಂ ತಿಳಿಯುವವರೊ
ಅವರೆ ಸಾವಿಲ್ಲದವರಾಗುವವರೂ ॥ ೧೦ ॥

ಯಾವಾಗ ಪಂಚಜ್ಞಾ-
ನೇಂದ್ರಿಯಗಳ್ಮನ ಸಹಿತ
ಸ್ವವಿಷಯುಗಳನುಸರಿಪ ಬಗೆಯ ತಡೆದೂ
ಆತ್ಮನಲ್ಲೇ ನೆಲೆಯು ನಿಂತಿರುವವೋ ।
ಬುದ್ಧಿಯೂ ಕದಲದೇ
ನಿಶ್ಚಲದಿ ನಿಂತಿಹುದೊ
ಅದು ಪರಮಗತಿ ಎಂದು ಹೇಳುತಿಹರೂ ।
ಉತ್ಕೃಷ್ಟ ಗತಿಯೆಂದು ಪೊಗಳುತಿಹರೂ ॥ ೧೦ ॥

ಈ ತರದವಸ್ಥೆಯನೆ
ಯೋಗವೆಂದರಿಯುವರು
ಸ್ಥಿರವಾದ ಇಂದ್ರಿಯದ್ಧಾರಣೆಯನೂ ।
ಹೊರಸರಿವ ಕರಣಗಳ ಹಿಡಿತವನ್ನೂ ॥
ಯಾವಾಗ ಇಂದ್ರಿಯದ
ಸ್ಥಿರದ ಧಾರಣೆಯೊಳು
ಜಾಗರಿತನಿರ್ಕ್ತ ಶಕ್ತಿ ಪಡೆಯಬಹುದೊ ।
ಆಗಲೇ ಯೋಗವದು ಸಿದ್ಧಿಸುವದೂ ॥ ೧೧ ॥

ಮಾತಿನಿಂದಲು ಅಲ್ಲ
ಮನಸಿನಿಂದಲು ಅಲ್ಲ
ಕಣ್ಣಿನಿಂದಲು ಪಡೆಯೆ ಶಕ್ಯವೇ ಇಲ್ಲ ।
ಇಂದ್ರಿಯಗಳಿಂದಲೂ ಸಾಧ್ಯವೇ ಇಲ್ಲ ॥
ಇದೆ ಎಂದು ಹೇಳುವಾ
ಇರುವಿಕೆಯ ಹುಡುಕುವಾ
ಆಗಮವನನುಸರಿಪ ಶ್ರದ್ಧಾಳು ಹೊರತೂ ।
ಇಲ್ಲೆಂಬುವವನವನ ಪಡೆಯುವುದು ಎನಿತೂ ॥ ೧೨ ॥

ಇದೆಯೆಂದು ನಿಶ್ಚಯದಿ
ತಿಳಿಯತಕ್ಕದು ಎರಡು
ಸೋಪಾಧಿ ನಿರೂಪಾಧಿ ತತ್ವಭಾವದೊಳು ।
ಅದು ಇದುವೆ ಎಂಬ ನಿಶ್ಚಯದ ಭಾವದೊಳು ॥
ಇದೆ ಎಂದು ಆತ್ಮನಂ
ನಿಶ್ಚಯದಿ ಪಡೆದವಗೆ
ಅದು ನೀನೆ ಎಂಬ ಭಾವನೆಯೆ ಹೊಳೆಯುವದೂ
ಅದ್ವೈತ ಭಾವವೇ ಹೊಳೆಯುತ್ತಲಿಹುದೂ ॥ ೧೩ ॥

ಇನಿತು ನಿಜವರಿತವಗೆ
ಯಾವಾಗ ಬುದ್ಧಿಯೊಳು

ನೆಲಸಿರುವ ಕಾಮುಗಳು ಎಲ್ಲ ನಶಿಸುವವೊ ||
ಎದೆಯೊಳಡಗಿದ ಕಾಮುವೆಲ್ಲವಡಗುವವೊ ||
ಆಗಲೇ ಮರ್ತ್ಯತಾ
ಮೃತ್ಯು ಪಥವನು ಕಳೆದು
ಸಾಯದಿರುವಿಕೆಯನ್ನು ಪಡೆವನವನೂ
ಇಲ್ಲಿಯೇ ಬ್ರಹ್ಮವನ್ನನುಭವಿಪನೂ || ೧೪ ||

ನಾನು ನನ್ನದು ಎಂಬ
ಹೃದಯ ಗ್ರಂಥಿಗಳೆಲ್ಲ
ಇಲ್ಲಿಯೇ ಯಾವಾಗ ಹರಿದುಹೋಗುವವೊ |
ಕಾಮುಗಳ ಬುಡವೆ ತಾ ಒಡೆದು ಹೋಗುವವೂ ||
ಮೃತ್ಯು ಪಥಕಳೆದಾಗ
ಅಮೃತತ್ವ ಹೊಂದುವನು
ಹೀಗೆಯೇ ಇರುವದದು ಉಪದೇಶವಿದುವೇ
ಸರ್ವವೇದಾಂತಗಳ ಉಪದೇಶವಿದುವೇ || ೧೫ ||

ನೂರು ಮತ್ತೊಂದು ಹೃದ-
ಯದಿ ಹೊರಟ ನಾಡಿಗಳು
ಅವುಗಳೊಳು ಶಿರ ಒಡೆದು ಪೊರಟುದೊಂದೇ
ಸುಷುಮ್ನ ಎನ್ನುವ ನಾಡಿ ಇರುವುದೊಂದೇ ||
ಅದರ ಮೇಲ್ ಪೋಗುವವ
ಅಮೃತತ್ವವನು ಪಡೆವ
ವಿವಿಧ ಗತಿ ಇಹ ಬೇರೆ ನಾಡಿಗಳವೂ ||
ಮರಣವಿಹ ಸಂಸಾರ ಕಾರಣವವೂ || ೧೬ ||

ಅಂಗುಷ್ಟಗಾತ್ರನಿಹ
ಪುರುಷಾಂತರಾತ್ಮತಾ
ಯಾವಾಗಲೂ ಜನರ ಹೃದಯದಲ್ಲಿರುವಾ |
ಬುದ್ಧಿಗುಹೆಯಲಿ ಹೊಕ್ಕು ಸನ್ನಿಹಿತನಿರುವಾ ||

ಮುಂಜೆಯಿಂನಾರಂತೆ
ತನ್ನ ತನುವಿಂದವನ
ಗೃಹಿಸುವುದು ತಿಳಿವುದೈ ಶುದ್ಧವಮೃತವನೂ ।
ಬ್ರಹ್ಮನವನರಿವುವೈ ಶುಭ್ರವಮೃತವನೂ ॥ ೧೭ ॥

ಮೃತ್ಯು ಪೇಳಿದ ಯಾವ
ಈ ಬ್ರಹ್ಮವಿದ್ಯೆಯನು
ನಚಿಕೇತ ಯಮುನಿಂದ ವರವ ಪಡೆದೂ ।
ಸಫಲವಿಹಯೋಗವಿಧಿಯೆಲ್ಲ ಪಡೆದೂ ॥
ಬ್ರಹ್ಮವನು ಪಡೆದವನು
ಕಳೆದು ಕಾಮುಗಳೆಲ್ಲ
ಮುಕ್ತನಾದನು ಸೇರ್ದ ಸಾವಿನಾಚೇ
ಆತ್ಮನರಿತನ್ಯನೂ ಸಾವಿನಾಚೇ ॥ ೧೮ ॥

ಕೂಡೆಮ್ಮ ಪಾಲಿಸಲಿ
ಕೂಡಿ ನಾವ್ ಭುಂಜಿಸಲಿ
ಕೂಡಿ ನಮ್ಮೊಳು ಬಲವು ಉಂಟಾಗಲೀ
ಕೂಡಿ ಬಲವನು ಮಾಡುವಂತಾಗಲೀ
ವೀರ್ಯವತ್ತಾಗಿರಲಿ
ನಾವು ಗಳಿಸಿರುವುದದು
ದ್ವೇಷ ಬೇಡವು. ನಮಗೆ ಶಾಂತಿಯಿರಲೀ
ಶಾಂತಿ ಇರಲೀ ಸ್ಥಿರಶಾಂತಿಯಿರಲೀ ॥ ೧೯ ॥

## ದ್ವಿತೀಯಾಧ್ಯಾಯದ ತೃತೀಯ ವಲ್ಲೀ

## ಕಠೋಪನಿಷತ್ತಿನ ಕನ್ನಡಾನುವಾದ ಸಮಾಪ್ತವು.

-----

Swatantra Mudranalaya, 220, Chamarajapet, Bangalore-2.

# ಶುದ್ಧ ಪತ್ರಿಕೆ

| ಪುಟ. | ಪಂಗ್ತಿ | ತಪ್ಪು | ಒಪ್ಪು |
|---|---|---|---|
| ೧ | ೫ | ಪ್ರಥವೋಧ್ಯಾಯದ | ಪ್ರಥಮಾಧ್ಯಾಯದ |
| ,, | ೧೬ | ವಿಶ್ವಜತು | ವಿಶ್ವಜಿತು |
| ,, | ೨೦ | ವಿಪುರಿಗೆಲ್ಲ | ವಿಪ್ರರಿಗೆಲ್ಲ |
| ೪ | ೫ | ಸತ್ಯತಗೆ | ಸತ್ಯತೆಗೆ |
| ,, | ೧೪ | ಪುಜ್ವಲಿಸು | ಪ್ರಜ್ವಲಿಸು |
| ೫ | ೪ | ನಮುಸೆ | ನಮಿಸೆ |
| ೮ | ೧೨ | ಮುಡಿಯಲ್ಲಿ | ಮುಡಿಯಲ್ಕೆ |
| ೧೧ | ೧೮ | ಪ್ರೇಮಿಯುವನೊ | ಪ್ರೇಮಿಯುವನೂ |
| ೧೬ | ೧೦ | ಅವನದು ಪಡೆವ | ಅವನದನೆ ಪಡೆವ |
| ೧೮ | ೩ | ತನ್ಮಾತ್ಮವನೆ | ತನ್ಮಾತ್ರವನೆ |
| ೨೩ | ೨ | ಆತ್ಮೋಪಾಧಿತ | ಆತ್ಮೋಪಾಧಿಕ |
| ೨೪ | ೧೫ | ಪ್ರಥಮಾಧ್ಯಾಯವೂ | ಪ್ರಥಮಾಧ್ಯಾಯ |
| ,, | ೧೭ | ದ್ವಿತೀಯಾಧ್ಯಾಯಾ | ದ್ವಿತೀಯೋಧ್ಯಾಯಃ |
| ೨೮ | ೮ | ಭಾವನೆ | ಭಾವನೆಯು |
| ,, | ೨೩ | ಇರನವ | ಇರನೂ |
| ,, | ೨೬ | ಚಿಗೆದೋಡು | ಚಿಗಿದೊ |
| ೩೦ | ೧೩ | ಜನಿಸಿನಿರುವ | ಜನಿಸಿರುವ |
| ೩೨ | ೧೨ | ವಾಯುವಬ್ಬನೆ | ವಾಯುವೊಬ್ಬನೆ |
| ,, | ೧೪ | ವಿಧ ವಿಧದ ಪ್ರತಿರೂಪ | ಹೊಕ್ಕುತಾ ಪ್ರತಿರೂಪ |

## ಮುಂದಿನ ಪ್ರಕಾಶನ

# ★ ಯಾರಿಗಾಗಿ ★

(ಬೃಹದಾರಣ್ಯಕ ಉಪನಿಷತ್ತಿನ
ಸಾರಸ್ಯ ವಿಭಾಗಗಳ ಕನ್ನಡ ಅನುವಾದ)